# ದಂಡಿ ದುರುಗಮ್ಮನ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ಕಿರುಪ್ರಬಂಧ)

ಸಂಶೋಧಕರು
ಡಿ. ಬಸವರಾಜ

ಮಾರ್ಗದರ್ಶಕರು
ಡಾ. ಹೆಬ್ಬಾಲೆ. ಕೆ. ನಾಗೇಶ್
ಪ್ರವಾಚಕರು ಮತ್ತು ಮುಖ್ಯಸ್ಥರು
ಜಾನಪದ ಅಧ್ಯಯನ ವಿಭಾಗ



ಸಮಾಜ ವಿಜ್ಞಾನ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೦೭

# ದಂಡಿ ದುರುಗಮ್ಮನ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ಕಿರುಪ್ರಬಂಧ)

ಸಂಶೋಧಕರು
ಡಿ. ಬಸವರಾಜ



ಮಾರ್ಗದರ್ಶಕರು
ಡಾ. ಹೆಬ್ಬಾಲೆ. ಕೆ. ನಾಗೇಶ್
ಪ್ರವಾಚಕರು ಮತ್ತು ಮುಖ್ಯಸ್ಥರು
ಜಾನಪದ ಅಧ್ಯಯನ ವಿಭಾಗ




ಸಮಾಜ ವಿಜ್ಞಾನ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೦೭

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಹೆಬ್ಬಾಲೆ.ಕೆ. ನಾಗೇಶ್ ಅವರ ಮಾರ್ಗದರ್ಶನದಲ್ಲಿ **"ದಂಡಿ ದುರುಗಮ್ಮನ ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯ ಕುರಿತು ಸಂಶೋಧನೆ ಮಾಡಿದುದರ ಫಲವಾಗಿ ಈ ಕಿರುಪ್ರಬಂಧವನ್ನು ೨೦೦೬-೦೭ ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಿದ್ದಪಡಿಸಲಾಗಿದೆ. ಈ ಮೊದಲು ಕಿರು ಪ್ರಬಂಧವನ್ನು ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ:
ಸ್ಥಳ: ವಿದ್ಯಾರಣ್ಯ

(ಡಿ. ಬಸವರಾಜ)
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣ ಪತ್ರ

"ದಂಡಿ ದುರುಗಮ್ಮನ ಸಾಂಸ್ಕೃತಿಕ ಅಧ್ಯಯನ" ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಡಿ. ಬಸವರಾಜ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

27/7/07

(ಡಾ. ಹೆಬ್ಬಾಲೆ ಕೆ. ನಾಗೇಶ್)
ಪ್ರವಾಚಕರು/ಮುಖ್ಯಸ್ಥರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ

# ಅರಿಕೆ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟ ಮಾನ್ಯ ಕುಲಪತಿಗಳಾಗಿದ್ದ ಡಾ. ಬಿ.ಎ. ವಿವೇಕ ರೈ ಹಾಗೂ ಹಂಗಾಮಿ ಕುಲಪತಿಗಳಾಗಿರುವ ಮಾನ್ಯ ಶ್ರೀ ಕೆ.ವಿ. ನಾರಾಯಣ ಮತ್ತು ಕುಲಸಚಿವರಾದ ಮಾನ್ಯಶ್ರೀ ವಿ. ಶಂಕರ ಇವೆರುಗಳಿಗೆ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಟಿ.ಆರ್.ಚಂದ್ರಶೇಖರ್ ಅವರಿಗೆ, ಅಧ್ಯಯನ ಅವಧಿಯಲ್ಲಿ ಪೂರಕ ಅಂಶಗಳನ್ನು ನೀಡಿ ಬರವಣಿಗೆಯನ್ನು ಗಮನಿಸಿ, ಪ್ರೋತ್ಸಾಹಿಸಿದ ಮಾರ್ಗದರ್ಶಕರು ಹಾಗೂ ಜಾನಪದ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ. ಹೆಬ್ಬಾಲೆ ಕೆ. ನಾಗೇಶ್ ಅವರಿಗೆ ಅಧ್ಯಯನದ ಸಂದರ್ಭದಲ್ಲಿ ಚರ್ಚೆ, ಸಂವಾದಕ್ಕೆ ನೆರವು ನೀಡಿ ಪ್ರೋತ್ಸಾಹಿಸಿದ ವಿಭಾಗದ ಅಧ್ಯಾಪಕರುಗಳಾದ ಡಾ.ಮಂಜುನಾಥಬೇವಿನಕಟ್ಟಿ, ಡಾ.ಸ.ಚಿ.ರಮೇಶ್, ಡಾ.ಮೊಗಳ್ಳಿಗಣೇಶ್, ಡಾ.ಸಿ.ಟಿ.ಗುರುಪ್ರಸಾದ್, ಡಾ.ಹರಿಶ್ಚಂದ್ರ ದಿಗ್ಸಂಗಿಕರ್ ಅವರುಗಳಿಗೆ ಹಾಗೂ ಡಾ.ಕೆ. ರವಿಂದ್ರನಾಥ್, ಕೊಟ್ರೇಶ ಅವರಿಗೂ ಹಾಗೂ ಶ್ರೀ ಅಬ್ದುಲ್‌ನಬಿ ಅವರಿಗೂ ನನ್ನ ಅಧ್ಯಯನ ಕಾಲಕ್ಕೆ ಸಹಕಾರ ನೀಡಿದ ಶ್ರೀ ಬಿ.ಎಸ್.ಸಿ. ಮ.ಮಹಾವಿದ್ಯಾಲಯದ ಪ್ರಾಂಶುಪಾಲರಾದ ಶ್ರೀಕೆ.ಜಿ. ಗುರುಬಸವನಗೌಡ ಹಾಗೂ ನನ್ನ ಸಹದ್ಯೋಗಿ ಮಿತ್ರರೆಗೆಲ್ಲರಿಗೂ ಚನ್ನಬಸಪ್ಪ ಮಂಜುನಾಥ ವಿಜಯಕುಮಾರ ನಿರಂಜನ ನಿಜಲಿಂಗಪ್ಪ ಶ್ರೀನಿವಾಸ ಕೊಟ್ರೇಶ್ ಮಲ್ಲೇಶ್ ಮಲ್ಲಪ್ಪಶಾಸ್ತ್ರಿ ಮಹೇಶ್ ಮಲ್ಲಿಕಾರ್ಜುನಗೌಡ ವೆಂಕಟೇಶ್ ಶಾಲಿನಿ ಮೇಡಂ ಮತ್ತು ಆಡಳಿತ ಸಿಬ್ಬಂದಿ ವರ್ಗದವರೆಲ್ಲರಿಗೂ ನನ್ನ ಕೃತಜ್ಞತೆಗಳು. ಹಾಗೂ ಶ್ರೀ, ಉ.ಜ. ಪ. ಪೂ.ಮ. ವಿದ್ಯಾಲಯದ ಪ್ರಾಂಶುಪಾಲರಾದ ಶ್ರೀಯುತ ಬಸವರಾಜ. ನನ್ನ ಹಿರಿಯ ಮತ್ತು ಸಹದ್ಯೋಗಿ ಮಿತ್ರರಾದ ಶಾಂತವೀರಯ, ಎಸ್.ಬಿ.ಮುದ್ದಿ, ಭರತ್‌ಭೂಷಣ್, ದಯಾನಂದ, ಕೃಷ್ಣಸಿಂಗ್, ಚನ್ನಬಸವನಗೌಡ, ಭದ್ರಶೆಟ್ಟಿ, ಶಿವಲಿಂಗಪ್ಪ, ಜಯಪ್ರಕಾಶ್, ಸರ್ಪಭೂಷಣ, ಶಿವಕುಮಾರ್, ಮಲ್ಲಿಕಾರ್ಜುನ, ಶಿವಕುಮಾರ್, ಅಶೋಕ, ಉಳಿದ ನನ್ನ ಎಲ್ಲಾ ಸಹದ್ಯೋಗಿಗಳೆಲ್ಲರಿಗೂ ಹಾಗೂ ಆಡಳಿತ ಸಿಬ್ಬಂದಿಗಳೆಲ್ಲರಿಗೂ ಮತ್ತು ಕನ್ನಡ ಅಧ್ಯಾಪಕ ವೇದಿಕೆಗೂ ನನ್ನ ಅನಂತ ವಂದನೆಗಳು. ಅಧ್ಯಯನದ ಸಂದರ್ಭದಲ್ಲಿ ಚರ್ಚೆಗೆಳಿಗೆ ಸಹಕಾರ ನೀಡಿದ ಸ್ನೇಹಿತರಾದ ಸೋಮಶೇಖರ, ನಿಂಗಪ್ಪ, ಪ್ರಕಾಶ್, ದುರುಗೇಶ್, ವೀರಪ್ಪ, ಪ್ರಕಾಶ್ ಮತ್ತು ಅರಸಿಕೇರಿ ದಂಡಿ ದುರುಗಮ್ಮ ದೇವಸ್ಥಾನದ ಕಮೀಟಿಯವರೆಲ್ಲರಿಗೂ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕಾರ ನೀಡಿದ ನನ್ನ ಮಿತ್ರರೆಲ್ಲರಿಗೂ ಕೃತಜ್ಞನಾಗಿದ್ದೇನೆ. ಮಗನ ಏಳ್ಗೆಗಾಗಿ ಹಗಲಿರುಳು ಶ್ರಮಿಸಿದ ಪೂಜ್ಯನೀಯ ಅಜ್ಜಿಯವರು ತಂದೆ ತಾಯಿಗಳು ಹಾಗೂ ಮಾವನವರಾದ ಪತ್ರೆಪ್ಪ, ವೀರಣ್ಣ, ಅವರಿಗೆ ಹೃದಯಪೂರ್ವಕ ನಮನಗಳು. ಹಾಗೂ ನನ್ನ ಸಹೋದರರಾದ ಚನ್ನಬಸಪ್ಪ, ಪ್ರಕಾಶ್, ಮತ್ತು ರಾಘವೇಂದ್ರ, ಕೆಂಪೇಗೌಡ, ಮಲ್ಲಿಕಾರ್ಜುನ, ಮತ್ತು ಮಂಜುಳಾ, ಸಹನಾ, ನಂದೀಶ್, ನಂದಿನಿ ಇವರೆಲ್ಲರನ್ನ ಈ ಸಂದರ್ಭದಲ್ಲಿ ಸ್ಮರಿರುವೆ. ನನ್ನ ಪ್ರಬಂಧ ರಚನೆಗೆ ಗ್ರಂಥಗಳನ್ನು ನೀಡಿ ಸಹಕರಿಸಿದ ವಿಶ್ವವಿದ್ಯಾಲಯದ ಗ್ರಂಥಪಾಲಕರು ಮತ್ತು ಸಿಬ್ಬಂಧಿ ವರ್ಗದವರೆಲ್ಲರಿಗೂ ಹಾಗೂ ಹಿರಿಯ ಸಹದ್ಯೋಗಿಗಳಾದ ಡಾ. ಅಕ್ಕಿ ಸುಜಾತ, ಸವಿತಾ ಸೊನ್ನ, ಅಂಜಿನಪ್ಪ, ಭಗವಂತಗೌಡರು, ಕೆ. ಭೀಮಣ್ಣ ಇವರೆಲ್ಲರಿಗೂ ನನ್ನ ಹೃದಯಪೂರ್ವಕ ವಂದನೆಗಳು ಈ ಸಂಪ್ರಬಂಧವನ್ನು ಪ್ರೀತಿಯಿಂದ ಡಿ.ಟಿ.ಪಿ. ಮಾಡಿಕೊಟ್ಟ ಶ್ರೀ ಎಚ್.ಎಂ. ವಿರುಪಾಕ್ಷಯ್ಯ ಬನ್ನಿಮಟ್ಟಿ ಯವರಿಗೆ ನನ್ನ ಹೃದಯಪೂರ್ವಕ ಕೃತಜ್ಞತೆಗಳು.

# ಪರಿವಿಡಿ

ಅಧ್ಯಯನ ಸ್ವರೂಪ ಮತ್ತು ಮಹತ್ವ / ೧

ಅಧ್ಯಾಯ : ೧
ಅರಸಿಕೇರಿಯ ಚಾರಿತ್ರಿಕ ನೋಟ / ೧೧
೧.೧. ಭೌಗೋಳಿಕತೆ
೧.೨. ಸಾಂಸ್ಕೃತಿಕ ನೋಟ
೧.೩. ಸಾಮಾಜಿಕ ಸಂಕ್ಷಿಪ್ತತೆ
೧.೪. ಧಾರ್ಮಿಕತೆ
೧.೫. ಶೈಕ್ಷಣಿಕ ಅವಲೋಕನ
೧.೬. ರಾಜಕೀಯ ನೆಲೆ

ಅಧ್ಯಾಯ ೨
ದಂಡಿ ದುರುಗಮ್ಮನ ಪರಿಕಲ್ಪನೆ / ೨೨
೨.೧ ಪದನಿಷ್ಪತ್ತಿ
೨.೨ ಐತಿಹ್ಯ ಪ್ರಕಾರ
೨.೩ ದಂಡಿ ದುರುಗಮ್ಮ ದೇವಿಯ ಮೂಲ
೨.೪ ಪೂಜಾ ವಿಧಾನ
೨.೫ ದೇವಿಯ ಆರಾಧಕರು
೨.೬ ಸ್ತ್ರೀ ದೈವ ಮತ್ತು ಪುರುಷ ದೈವ

ಅಧ್ಯಾಯ ೩
ಆಚರಣೆ, ಸಂಪ್ರದಾಯ, ನಂಬಿಕೆ, ಹಬ್ಬಗಳು ಮತ್ತು ಜಾತ್ರೆಗಳು / ೪೦

ಅಧ್ಯಾಯ ೪
ದೈವಗಳ ಸ್ಥಿತ್ಯಂತರಗಳು / ೪೭

ಅಧ್ಯಾಯ ೫
ಆಧುನಿಕತೆ ಮತ್ತು ದೈವಗಳು / ೫೦

**ಅಧ್ಯಾಯ ೬**
**ಉಪಸಂಹಾರ / ೫೮**

**ಅನುಬಂಧಗಳು / ೬೨**
೧. ಹಾಡುಗಳು
೨. ವಕ್ತೃ ವಿವರ
೩. ಅರ್ಚಕರ ವಂಶಾವಳಿ
೪. ಆಕರ ಗ್ರಂಥಗಳು
೫. ಛಾಯಾಚಿತ್ರಗಳು

# ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

## ಪ್ರಸ್ತಾವನೆ

ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುವ ಪ್ರಾಥಮಿಕ ಆಕರಗಳನ್ನು ಬಳಸಿಕೊಂಡು ತಾತ್ಕಾಲಿಕವಾಗಿ ಚರಿತ್ರೆಯ ಹಿನ್ನೆಲೆಯಲ್ಲಿ ಕಟ್ಟುವುದು ಇಂದು ಅನಿವಾರ್ಯವಾಗಿದೆ. ನಾಡಿನ ವಿಧಿವಿಧಾನಗಳನ್ನು ನಾಗರೀಕತೆಯ ಪ್ರಭಾವಕ್ಕೊಳಗಾಗಿ ವಿವಿಧ ರೀತಿಯ ಪ್ರಕ್ರಿಯೆಗಳಿಂದ ಹಾಗೂ ವಿಜ್ಞಾನದ ಹೊಸ ಹೊಸ ಆವಿಷ್ಕಾರಗಳಿಂದ ತನ್ನದೇ ಆದ ಬದಲಾವಣೆಗಳನ್ನು ಪಡೆಯುತ್ತಿವೆ. ಪ್ರತಿಯೊಂದು ಸಮಾಜವು ತನ್ನದೇ ಸ್ವಂತಿಕೆಯನ್ನು ಮರುರೂಪಿಸಲು ಪರಂಪರಾಗತವಾಗಿ ಬಂದಂತಹ ಕೆಲವು ಸಾಂಸ್ಕೃತಿಕ ಮಹತ್ವಗಳು ಮರಿಚೀಕೆಯಾಗುತ್ತಿವೆ. ಅಂತವುಗಳನ್ನು ಉಳಿಸುವ ದೃಷ್ಠಿಯಿಂದ ಅಧ್ಯಯನ ಮಾಡಬೇಕಾದುದು ಔಚಿತ್ಯಪೂರ್ಣವಾಗಿದೆ.

ಈ ಜಾನಪದವು ಬಹು ಪುರಾತನವಾದುದು. ಎಲ್ಲಾ ಜ್ಞಾನ ಶಿಸ್ತುಗಳಿಗೆ ಮೂಲನೆಲೆ. ಇದು ಬಾಯಿಂದ ಬಾಯಿಗೆ ಹರಿದು ಬಂದ ಪರಂಪರಾನುಗತವಾಗಿ ಜಾನಪದ ಮೌಖಿಕ ಆಕರಗಳಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿ ಬೆಳೆಸಿಕೊಳ್ಳುತ್ತಾ ಬಂದಿರುತ್ತದೆ. "ಬತ್ತದ ಜೀವಂತ ನದಿಯಂತೆ" ತನ್ನ ಪರಂಪರೆಯ ಬದಲಾವಣೆಗೆ ಜನಪದವೇ ಮೂಲ ಅಡಿಪಾಯ. ಜನಪದರು ಪೂರ್ವದಿಂದಲೂ ದೈವವನ್ನು ಆರಾಧಿಸುತ್ತಾ ಬಂದಿದ್ದಾರೆ. ಅವರು ದೈವಗಳ ಸಂಪ್ರದಾಯ, ಪೂಜಾವಿಧಾನ, ಆಚರಣೆ, ಹರಕೆ, ನಂಬಿಕೆ, ಉತ್ಸವ, ಜಾತ್ರೆ ಇಂತಹ ಹಲವಾರು ಆಚರಣೆಗಳು ಪುರಾತನ ಕಾಲದಿಂದಲೂ ನಡೆಸಿಕೊಂಡು ಬಂದಿದ್ದಾರೆ.

[೧] "ಭಯದಿಂದಲೇ ಭಕ್ತಿ" ಎನ್ನುವ ಉಲ್ಲೇಖದಂತೆ "ಆದೀಮ ಮಾನವನು ಪ್ರಕೃತಿಯೊಂದಿಗೆ ಸಂಘರ್ಷಕ್ಕೆ ಬಿದ್ದಾಗ, ಮಾಂತ್ರಿಕ ಆಚರಣೆಗಳಿಗೆ ಇಳಿದಾಗ ತಾನು ಜಯಿಸಲೇಬೇಕಾಗಿದೆ ಎಂದುಕೊಂಡು. ನಿಸರ್ಗ ಶಕ್ತಿಯನ್ನು ಮಣಿಸಲು ಹಾಗೂ ಒಲಿಸಿಕೊಳ್ಳಲು ಮಾನವ ಆರಂಭಿಕ ತರ್ಕ ಏನೇನೋ ಹಾದಿಯನ್ನು ಸೂಚಿಸಿತು. ಅವೆಲ್ಲವೂ ಆಚರಣೆಗಳಾಗಿ ರೂಪಗೊಂಡವು. ಇಂತ ಆಚರಣೆ ಮತ್ತು ನಂಬಿಕೆಗಳ ಮೂಲಕವೇ ದೈವದ ಬಗೆಗಿನ ಪರಿಕಲ್ಪನೆ ಬೆಳೆದುಬಂತು. ದೈವಗಳ ಬಗೆಗಿನ ಪರಿಕಲ್ಪನೆ ಮನುಷ್ಯನ ಮನಸ್ಸಿನಲ್ಲಿ ಯಾವಾಗ ಪ್ರಾರಂಭವಾಯಿತೆಂಬುದು ಮುಖ್ಯವಾದ ಸಂಗತಿ. ಈ ದೈವದ ಹುಟ್ಟಿಗೆ ಮನುಷ್ಯನಲ್ಲಿದ್ದ ಭಯವೇ ಮೂಲಕಾರಣವಾಗಿದೆ."[೧] ಎಲ್ಲಾ ಸೃಷ್ಟಿಯ ಹಿಂದಿನ ರಹಸ್ಯಗಳ ಕಣ್ಣಿಗೆ ಕಾಣದ ಯಾವುದೋ ಶಕ್ತಿಯಾಗಿದೆ. ಅವನು ಆಶ್ಚರ್ಯಚಕಿತನಾಗಿ ಚಿಂತಿಸತೊಡಗಿದ ಕೆಲವು ಸಂದರ್ಭಗಳಲ್ಲಿ ತಾಯಿಯಂತೆ ಸಂರಕ್ಷಸಿದರೆ ಇನ್ನೂ ಕೆಲವು ಸಲ ಮಾರಿಯಂತೆ

ಆಕ್ರೋಶಗೊಂಡು ಈ ಧರೆಯಲ್ಲಿ ನರಮನುಷ್ಯನನ್ನು ತಲ್ಲಣಗೊಳಿಸುತ್ತದೆ. ಸುನಾಮಿ, ಭೂಕಂಪ ಕಾಳ್ಗಿಚ್ಚು, ಗುಡುಗು, ಸಿಡಿಲಿನಿಂದ ಆರ್ಭಟಿಸಿ, ಆಹುತಿ ತೆಗೆದುಕೊಳ್ಳುವ ಅದಮ್ಯ ಚೈತನ್ಯವೆಂಬ ಪ್ರಜ್ಞೆ ಅವರಲ್ಲಿ ಹೆಚ್ಚಿಸುತ್ತದೆ. ಅಂತಹ ಶಕ್ತಿಯ ಬಗ್ಗೆ ಅವ್ಯಕ್ತ ಭಯ, ಬೀತಿ ಮತ್ತು ಅದನ್ನು ಶಾಂತಿ ಮಾಡುವ ಆಕಾಂಕ್ಷೆ ಮನುಷ್ಯನನ್ನ ದೈವತ್ವದ ಕಡೆಗೆ ವಾಲಿಸುತ್ತದೆ. ಈ ದೈವತ್ವದ ಪರಿಕಲ್ಪನೆ ಅನೇಕ ವರ್ಷ ಉರುಳಿದರೂ ಇನ್ನು ಗ್ರಾಮೀಣ ಪ್ರದೇಶದಲ್ಲಿ ದೈವಗಳ ಉಪಾಸನೆಯ ಜೀವಂತವಾಗಿ ಉಳಿದುಕೊಂಡಿದೆ.

ಜಾನಪದ ಅಂಶಗಳ ಮೂಲಕ ಸಾಂಸ್ಕೃತಿಕವಾಗಿ ಸಂಶೋಧನೆ ಮಾಡಬೇಕಾದ ಅಗತ್ಯತೆಯಿದೆ. ಗ್ರಾಮದೇವತೆಗಳ ಪರಿಚಯ ಅಲಿಯ್ಲ್ಲ ಪರಿಸರದೊಂದಿಗೆ ಇರುವ ಮನುಷ್ಯನ ಸಂಬಂಧ ಹಾಗೂ ಸಾಂಸ್ಕೃತಿಕವಾಗಿ ಬದಲಾಗುತ್ತಿರುವ ಅಂಶಗಳನ್ನು ಅಧ್ಯಯನ ಮೂಲಕ ಬೆಳಕಿಗೆ ತರುವುದು. ಇಂದು ಅನಿವಾರ್ಯವಾಗಿದೆ. ಇಲ್ಲಿಯವರೆಗೂ ಗ್ರಾಮೀಣ ದೈವಗಳ ಜೊತೆಗೆ ಜನಪದ ಕಥೆ, ಹಾಡು, ಐತಿಹ್ಯ, ಆಚರಣೆ ಮೂಢನಂಬಿಕೆಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುವ ವಿಷಯದ ಬಗ್ಗೆ ಕ್ರೋಢೀಕರಿಸಲು ಪ್ರಯತ್ನಿಸುತ್ತಾನೆ.

ಹೀಗೆ ಅಧ್ಯಯನ ಮಾಡುವುದರ ಮೂಲಕ ಒಂದು ನಾಡಿನ ಸಾಂಸ್ಕೃತಿಕ ಆಚರಣೆ, ಸಂಪ್ರದಾಯ, ಅಲ್ಲಿಯ ಜನಜೀವನ ಬದುಕಿನ ವ್ಯವಸ್ಥೆಯನ್ನು ತೆರೆದು ತೋರಿಸಬೇಕಾಗಿದೆ. ಸಂಶೋಧನೆ ಮಾಡಬೇಕಾದರೆ ಜಾನಪದ, ಅಧ್ಯಯನಗಳಂತೂ ಪೂರ್ತಿಯಾಗಿ ಕ್ಷೇತ್ರಕಾರ್ಯವನ್ನ ಅವಲಂಭಿಸಬೇಕಾಗಿದೆ. ನನ್ನ ಅಧ್ಯಯನದ ಮೂಲ ವಿಷಯವಾಗಿ "ಅರಸಿಕೇರಿ ದಂಡಿನ ದುರುಗಮ್ಮ ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಈ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಛಾಯಾಚಿತ್ರ ತೆಗೆಯುವುದು, ಸಂಶೋಧನೆಗೆ ಪೂರಕವಾದ ಮೌಖಿಕ ಸಾಹಿತ್ಯವನ್ನು ಕ್ರೋಢೀಕರಿಸುವುದು, ಗ್ರಾಮದೇವತೆಗಳು ಮತ್ತು ಪೂಜಾ ವಿಧಿ ವಿಧಾನಗಳನ್ನು ನೋಡುವುದು ಪ್ರಮುಖವಾಗಿದೆ. ಇದಕ್ಕೆ ಸಂಶೋಧನೆ ಮಹಾಪ್ರಬಂಧಗಳು, ಜಾನಪದ ಸಾಹಿತ್ಯದ ಶಬ್ಧಕೋಶ, ಪತ್ರಿಕೆಗಳು, ಸಂಪಾದಕ ಮಸ್ತಕಗಳು, ಇಂತಹ ಹಲವು ಆಕರಗಳನ್ನು ಈ ಸಂಶೋಧನೆಗೆ ಆಕರಗಳಾಗಿ ಬಳಸಿಕೊಂಡಿದ್ದೇನೆ. ಅಲ್ಲದೆ ಅನ್ಯಪಂಥ ಭಂಡಾರಗಳ ಮೂಲಕ ಸ್ಥಳಪುರಾಣಗಳ ಮೂಲಕ ಜನಸಾಮಾನ್ಯರು ಹೇಳುವ ಪುರಾಣಗಳು, ಕಟ್ಟು ಕಥೆಗಳು ಇಂತವುಗಳ ಮೇಲೆ ವಿಷಯ ಹೆಣೆಯುವುದು ಮುಖ್ಯವಾಗಿದೆ.

ಜಾನಪದ ಅಧ್ಯಯನಗಳ ಕುರಿತು ದೇಶಾದ್ಯಾಂತ ಇಂದು ಮಹತ್ತರವಾದ ವಾದ ವಿವಾದಗಳು ಜರುಗುತ್ತವೆ. ಕಳೆದ ನೂರಾಐವತ್ತು ವರ್ಷಗಳಲ್ಲಿ ಜಾನಪದ ಶಾಬ್ದಿಕ ಮತ್ತು ಅಶಾಬ್ದಿಕ ಸ್ವರೂಪಗಳನ್ನು ಕ್ರೋಢಿಕರಿಸಿ, ವಿಭಾಗಿಸಿ, ವಿಶ್ಲೇಷಿಸುವ ಕ್ರಿಯೆ ಬಹಳ ವ್ಯಾಪಕವಾಗಿ ನಡೆಯುತ್ತದೆ. ಜಾನಪದ ಸಮುದಾಯದ ಸಂಸ್ಕೃತಿ ಶೋಧನೆಗೆ ಮೂಲ ಮತ್ತು ಪ್ರಬಲ ಆಕರಗಳು ಇದಕ್ಕೆ ಮೂಲ ತಳಪಾಯವಾಗಿದೆ. ಒಂದು ಕಡೆ ಕ್ರೋಢೀಕರಣವಾದರೆ ಅದರ ಇನ್ನೊಂದು ಕಡೆ ಅವುಗಳ ಕ್ಷೇತ್ರಕಾರ್ಯ

ನಡೆಯಬೇಕಾಗಿದೆ. ಒಂದು ಮಗ್ಗಲಲ್ಲಿ ವಿಶ್ಲೇಷಣೆ ನಡೆದರೆ ಇನ್ನೊಂದು ಮಗ್ಗಲಲ್ಲಿ ಆಯಾ ಶಾಬ್ದಿಕ ಅಶಾಬ್ದಿಕ ಸಾಹಿತ್ಯ ಆಚರಣೆಗಳು ಜನಪದ ಜೀವನ ಹೇಗೆ ರೂಪಗೊಂಡಿದೆ, ಹೇಗೆ ನಮ್ಮ ಜನಪದರ ಸಾಂಸ್ಕೃತಿಕ ಜೀವನದಿಂದ ಮೊದಲುಗೊಂಡು, ಆ ವರ್ಗದ ಬದುಕಿನಲ್ಲಿ ನೆಲೆಗೊಂಡು ಅವು ದೈನಂದಿನ ಬದುಕಿನಲ್ಲಿ ಬೆರೆತು ಹೋಗಿದೆ. ತಲೆ ತಲಾಂತರದಿಂದಲೂ ಜನಪದ ಬದುಕು ರೂಪಿಸುವ ಎಲ್ಲಾ ಆಯಾಮಗಳ ಕ್ರಿಯೆಗಳನ್ನು ಕೇಂದ್ರೀಕರಿಸುವ ಶಕ್ತಿಗಳಾಗಿವೆ. ಈ ವಿಷಯ ಆಳವಾದ ಶೋಧನೆಗಳ ಮೂಲಕ ಬೆಳಕಿಗೆ ತರಬೇಕಾಗಿದೆ. ಜಾನಪದ ಅಧ್ಯಯನ ಕೇವಲ ಸಂಕೀರ್ಣ ಅಧ್ಯಯನವಾಗಿ ಉಳಿಯದೇ ಅದೊಂದು ಕಡ್ಡಾಯ ಶಿಕ್ಷಣವಾಗಬೇಕು.

ಕಳೆದ ಹದಿನೈದು ವರ್ಷಗಳಿಂದ ಕರ್ನಾಟಕದಲ್ಲಿ ನಡೆದಿರುವ ಜಾನಪದ ಅಧ್ಯಯನ ಈ ನಿಟ್ಟಿನಲ್ಲಿ ತನ್ನ ಕಾಲನ್ನಿಡುತ್ತದೆ. ಅನೇಕ ಜನಾಂಗದ ಸಂಸ್ಕೃತಿಗಳ ಕರಗುವಿಕೆ ಎಂದು ವಿದ್ವಾಂಸರಿಂದ ಗುರುತಿಸಲಾಗಿರುವ ಭಾರತದ ಜಾನಪದ ಅಧ್ಯಯನಕ್ಕೆ ಬರುವ ಶತಮಾನದ ಒಂದು ಆಹ್ವಾನವಾಗಿದೆ. ಅವರ ಫಲಸ್ವರೂಪವಾಗಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಜನಪದ ಕೆಲವು ಮೂಲಭೂತ ಸಮಸ್ಯೆಗಳನ್ನು ಕುರಿತು ಸಂಶೋಧನೆಗಳು ನಡೆದಿವೆ. ಮೊದಲಿನಿಂದ ಇಂದಿನವರೆಗೂ ಹತ್ತಾರು ಮಹಾಪ್ರಬಂಧಗಳು ರೂಪಗೊಂಡಿವೆ.

ದೈವಗಳ ಆರಾಧನೆಯು ಮಾನವನ ಪೂರ್ವಕಾಲದಿಂದಲೂ ನಡೆದು ಬಂದಿದೆ. ಮನುಷ್ಯ ಸಮಾಜ ಜೀವಿಯಾಗಿ ಬದುಕಲು ಪ್ರಾರಂಬಿಸಿದೊಡನೆ ತನ್ನ ವ್ಯವಸ್ಥೆಯನ್ನು ಕಟ್ಟಿಕೊಂಡು ಜೀವಿಸಲು ಪ್ರಾರಂಭ ಮಾಡಿದಾಗ ಹಸಿವನ್ನು ಹಿಂಗಿಸಿಕೊಳ್ಳಲು ಬೇಟೆಯಾಡಿದ ನಂತರ ಅದನ್ನು ಬೇಯಿಸಿಕೊಂಡು ತಿನ್ನುತ್ತಿದ್ದನು, ಅನಂತರ ಮಾನವನ ಬಯಕೆಗಳು ಹುಟ್ಟಿಕೊಂಡವು. ಬೇಸಾಯವನ್ನು ಪ್ರಾರಂಬಿಸಿದೊಡನೇ ಅವನ ಬದುಕಿನ ರೀತಿ ದಿನದಿಂದ ದಿನಕ್ಕೆ ಬದಲಾಯಿತು. ತನ್ನ ಸುತ್ತಮುತ್ತಲಿನ ಪರಿಸರದ ರಹಸ್ಯಗಳನ್ನು ನೋಡಲಾರಂಬಿಸಿರಬೇಕು. ಆಗ ಭಯಗೊಂಡ ಮನುಷ್ಯ ದೈವತ್ವಕ್ಕೆ ಮೊರೆಹೋಗಿರಬೇಕು. ದೈವದ ಹುಟ್ಟಿಗೆ ಪ್ರಕೃತಿಯಲ್ಲಿ ಹಲವು ಕಾರಣಗಳಿರಬಹುದು. ಅಥವಾ ಈ ಮನುಷ್ಯ ಕಂಡುಕೊಂಡ ಹಲವು ಮಾಂತ್ರಿಕಾಚರಣೆಗಳೂ ಕಾರಣವಾಗಿರಬಹುದು, ಇವು ಮಾನವರಲ್ಲಿ ಭೀತಿಯನ್ನು ಹುಟ್ಟಿಸಿ ದೈವತ್ವದ ಧಾರ್ಮಿಕ ಪರಿಕಲ್ಪನೆಗಳು ಆಚರಣೆಗಳಾಗಿ ಹುಟ್ಟಿಕೊಂಡಿರಬೇಕು.

ಮಾತೃದೇವತೆಯ ಪರಂಪರೆಯು ಬಹು ಪ್ರಾಚೀನವಾದುದು. ಅಂದರೆ ಸುಮಾರು ನಾಲ್ಕನೂರು ವರ್ಷಗಳಿಂದಲೂ ಆಚರಿಸುತ್ತಾ ಬಂದಿದ್ದು ತನ್ನದೇಯಾದ ಪರಂಪರೆ ಹೊಂದಿದೆ. ಈ ಪರಂಪರೆಯ ಅಸ್ತಿತ್ವ ಇಂದಿಗೂ ಜನಪದರಲ್ಲಿ ಕಂಡುಬರುತ್ತದೆ. ಉದಾ: ಭೂಮಿಪೂಜೆ, ಗಂಗೆಪೂಜೆ, ಸ್ತ್ರೀ ರೂಪದಲ್ಲಿ ಆರಾಧಿಸುವ ಹಲವು ದೇವತೆಗಳು ಗ್ರಾಮ ದೇವತೆಗಳಾಗಿ ರೂಪಗೊಂಡವು. ಸ್ತ್ರೀ ಪೂಜೆಯ ಆರಂಭದಿಂದಲೇ ಕಂಡುಬರುತ್ತದೆ. ಎಲ್ಲಮ್ಮ, ದುರುಗಮ್ಮ ಇನ್ನೂ ಮುಂತಾದ ದೇವತೆಗಳು ಇರುವುದನ್ನು ಮತ್ತು ಪ್ರಸ್ತುತ ದಿನಗಳಲ್ಲಿ ಅವುಗಳನ್ನು ಆರಾಧಿಸುವುದನ್ನು ಕಾಣುತ್ತೇವೆ. ಗ್ರಾಮೀಣ ದೈವಗಳ ಅಧ್ಯಯನ ಬೇರೆ ಬೇರೆ ಆಯಾಮಗಳಿಂದ ಮಾಡಲು ಸಾದ್ಯ. ಪೌರಾಣಿಕ, ಐತಿಹಾಸಿಕ,

ಜನಪದ ಕಥೆ, ಸ್ಥಳ ಪುರಾಣ ಸಮಾಜಶಾಸ್ತ್ರ ಹೀಗೆ ವಿಭಿನ್ನ ಆಯಾಮಗಳನ್ನು ಬಳಸಿಕೊಂಡು ಅಧ್ಯಯನ ಮಾಡಬಹುದಾಗಿದೆ. ಹೀಗಾಗಿ ಮಾತೃ ಕುಟುಂಬದ ದ್ರಾವಿಡರು ನಂತರ ಕಾಲದಲ್ಲಿ ಆರ್ಯರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೀಗೆ ಇವೆರಡು ಸಂಸ್ಕೃತಿಗಳು ಸಮೀಕರಣಗೊಂಡಿವೆ. ಗ್ರಾಮಗಳಲ್ಲಿ ಸ್ತ್ರೀ ದೈವಗಳು ಪುರುಷದೈವಗಳಿವೆ. ಬುಡಕಟ್ಟು ವರ್ಗದವರು ಬಹುತೇಕ ಸ್ತ್ರೀ ದೇವತೆ ಮೊರೆಹೋದರೆ, ಮೇಲ್ವರ್ಗದವರು ಪುರುಷ ದೈವದ ಮೊರೆಹೋಗುತಾರೆ. ಅರಸಿಕೇರಿಯಲ್ಲಿ ಶಿಷ್ಠ ದೇವರ ಪ್ರಭಾವವಿದ್ದರೂ "ದಂಡಿನ ದುರುಗಮ್ಮ"ನ ಆರಾಧನೆಯು ಸಾಮಾಜಿಕವಾಗಿ ಎಲ್ಲಾ ವರ್ಗದವರ ಆರಾಧನೆಗೆ ಭಾಜನವಾಗಿದ್ದಾಳೆ.

ಗ್ರಾಮದೇವತೆಗಳ ಸರ್ಕಾರಿ ಗೆಜೆಟರಿಯಲ್ಲಿ (ಸರ್ಕಾರಿ ದೇವತಾ ಪಟ್ಟಿಯಲ್ಲಿ) ಸ್ತ್ರೀ ದೈವವೆಂದು ನಮೂದಿಸಲಾಗಿದೆ. ಸಪ್ತಮಾತೃಕೆಯರೆಂದು ಜನರಿಂದ ಕರೆಸಿಕೊಳ್ಳುವ ಊರಮ್ಮ, ದುರುಗಮ್ಮ, ಕಾಳಮ್ಮ, ಎಲ್ಲಮ್ಮ, ಚೌಡಮ್ಮ ಹೀಗೆ ಆಯಾ ಪ್ರದೇಶಗಳಲ್ಲಿ ಗ್ರಾಮದೇವತೆಗಳಾಗಿ ನೆಲೆಗೊಂಡು. ಆಯಾ ಜನಾಂಗದೊಡನೆ ಈ ದೇವತೆಗಳು ಮಹಾದೈವತ್ವದ ಶಕ್ತಿಯಾಗಿ ರೂಪಗೊಂಡಿವೆ. ಆದರೆ ಅರಸಿಕೇರಿ ದಂಡಿ ದುರುಗಮ್ಮ ಈ ಗ್ರಾಮದ ಓಲೆಕಾರ ಮರಿಯಜ್ಜನಲ್ಲಿ ಅವತಾರವೆತ್ತಳು. ಅಂದಿನ ಆ ಗ್ರಾಮದ ಗ್ರಾಮದೇವಿಯಾಗಿ ರೂಪಗೊಂಡಳು. ಇದಕ್ಕೆ ಜಾನಪದ ಗೀತೆ ಮೂಲ ಆಕರವಾಗುತ್ತದೆ. ಮತ್ತು ಇದಕ್ಕೆ

ವಕ್ತೃವಿನ ಹೇಳಿಕೆ ಮುಖ್ಯವಾಗಿರುತ್ತದೆ. ವಿಜಯನಗರ ಸಾಮ್ರಾಜ್ಯ ಪತನದ ನಂತರ ಹುಟ್ಟಿಕೊಂಡ ಪಾಳೆಗಾರರು ಈ ದೈವಕ್ಕೆ ಮೊರೆಹೋಗುತ್ತಾರೆ. ದಂಡಿನ ದುರುಗಮ್ಮ ಮಹತ್ವದ ದೃಷ್ಠಿಯಿಂದ ಗ್ರಾಮದೈವವಾಗಿ ರೂಪಗೊಂಡಳು. ಈ ಅರಸಿಕೇರಿ ಗ್ರಾಮದಲ್ಲಿ ಪಾರ್ವತಿಯು ದುರ್ಗಿಯ ಅವತಾರವಿತ್ತಳು. ದಂಡಿನದುರ್ಗಿ ಈ ಭಾಗದ ಸತ್ವಯುತವಾದ ದೇವರಾಗಿ ಕಂಡು ಬರುತ್ತದೆ. ಮುಗ್ಧ ಜನರ ಶೋಷಣೆಗೆ ಒಳಗಾದ ಜನರಿಗೆ ಸ್ಥೈರ್ಯ ತುಂಬಿ ಈ ಪ್ರಾದೇಶಿಕ ಭಾಗದಲ್ಲಿ ಶಾಂತಿ ನೆಮ್ಮದಿ ಮತ್ತು ಸಹಬಾಳ್ವೆಯಿಂದ ಬದುಕನ್ನು ನೀಡಿದ್ದಾಳೆ.

ಈ ಅಧ್ಯಯನ ಒಂದು ಪ್ರಾದೇಶಿಕ ನಾಡಿಗೆ (ಅರಸಿಕೇರಿ ಪ್ರದೇಶಕ್ಕೆ) ಸೀಮಿತವಾಗಿ ವಿಷಯ ಚಿಂತನೆಯನ್ನು ಮಾಡಲಾಗಿದೆ. ನನ್ನ ಕ್ಷೇತ್ರ ಕಾರ್ಯದಲ್ಲಿ ಸಿಕ್ಕ ವಿಷಯಗಳ ಆಧಾರದ ಮೇಲೆ ಪರಿಷ್ಕರಿಸಲಾಗಿದೆ. ನನ್ನ ಶೋಧನೆಯ ಆಕರಗಳಲ್ಲಿ ತಪ್ಪು ಕಂಡುಬಂದರೆ ಆಯಾ ಪ್ರದೇಶದ ಪ್ರಾದೇಶಿಕತೆಗೆ ಅನುಗುಣವಾಗಿ ಸಂಸ್ಕೃತಿಯ ಆಚಾರ ವಿಚಾರಗಳ ಪರಿಣಾಮವಾಗಿ ಸದರಿ ಪ್ರಬಂಧದಲ್ಲಿ ಕೆಲವು ಭಿನ್ನ ಅಂಶಗಳನ್ನೊಳಗೊಂಡಿದೆ. ಸಂಶೋಧನೆಯು ನೂತನ ಕಾರ್ಯ ಕ್ಷೇತ್ರಕ್ಕೆ ಆಹ್ವಾನಿಸುತ್ತದೆ. ಪ್ರಮುಖವಾಗಿ ನನ್ನ ಕ್ಷೇತ್ರಕ್ಕೆ ಸಂಬಂಧಿಸಿದ ವಿಷಯವನ್ನು ವಿವೇಚಿಸಲು ಮಹತ್ವಪೂರ್ಣ ಕೃತಿಗಳು ನನಗೆ ಕೈಪಿಡಿಯಂತೆ ಸಹಕಾರಿಯಾಗಿವೆ. ಲಿಂಗಯ್ಯನ "ಕರ್ನಾಟಕ ಗ್ರಾಮ ದೇವತೆ" ಸಿದ್ದಲಿಂಗಯ್ಯನವರ ಗ್ರಾಮದೇವತೆ ಚನ್ನಣ್ಣ ವಾಲಿಕಾರ ಮಹಾಪ್ರಬಂಧ ಹೈದ್ರಾಬಾದ್ ಕರ್ನಾಟಕ ದೇವತೆಗಳು ಹೀಗೆ ಇನ್ನೂ ಹತ್ತು ಹಲವು ಗ್ರಂಥಗಳನ್ನು ನನ್ನ ಸಂಶೋಧನಾ ಅಧ್ಯಯನಕ್ಕೆ ಮಹತ್ವದ ವಿವೇಚನೆಯನ್ನು ಮಾಡಲು ಅನುವು ಮಾಡಿಕೊಡುತ್ತದೆ.

ಒಂದು ಜನಾಂಗ ಮತ್ತು ಸಂಸ್ಕೃತಿಯಲ್ಲಿ ಸಂಕುಚಿತ ವ್ಯಾಪಕ ಅರ್ಥದಲ್ಲಿ ಗ್ರಾಮದೇವತೆಗಳ ಪಾತ್ರ ಮಹತ್ವಪೂರ್ಣವಾಗಿದೆ. ಜನಸಾಮಾನ್ಯರ ಗುಂಪಿನಿಂದ ರೂಪಗೊಂಡ ದೈವತ್ವವು ಸಾಮಾನ್ಯ ಮನುಷ್ಯನಿಗಿಲ್ಲದ ಶಕ್ತಿ ಪ್ರತಿಷ್ಠೆ ಯಾವಾಗ ಬೇಕಾದರೂ ತಕ್ಷಣ ಪ್ರತ್ಯೇಕ್ಷವಾಗುತ್ತದೆ. ಎಂತಹ ವ್ಯಕ್ತಿ ಜೊತೆಗಿದ್ದರೂ ದೇವರು ಅಥವಾ ದೈವತ್ವ ಎನ್ನುವ ಪರಿಕಲ್ಪನೆ ಮನುಷ್ಯನು ತಲೆ ಬಾಗುತ್ತಾನೆ. ದೈವತ್ವ ಎಂದರೆ ಎಂತಹ ಶಕ್ತಿ ವಿರುದ್ದ ಗೆಲ್ಲುವ ಶಕ್ತಿಯಾಗಿರುತ್ತದೆ. ಜನಪದರ ಬೇರೆ ಬೇರೆ ವರ್ಗಗಳ ಜಾತಿ ಸಮೂಹಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ. ಮಾನವ ಬೆಳೆದ ಮೇಲೆ ಸೃಷ್ಟಿಸಿದ ದೇವರಿಂದ ದೂರ ಸರಿಯತೊಡಗಿದ್ದರೂ ಮತ್ತೊಂದು ಕಡೆ ಪೂಜಿಸುತ್ತಾನೆ. ಜನಪದರ ವ್ಯಾಪಕ ಬದುಕಿನಲ್ಲಿ ಎಲ್ಲಾ ಕೆಲಸಗಳಿಗೂ ಚಾಲನೆ ನೀಡಿ ಮತ್ತು ನಿಯಂತ್ರಿಸುವ ಶಕ್ತಿ ರೂಪಗೊಳ್ಳುತ್ತದೆ. ಗ್ರಾಮೀಣ ದೈವಗಳ ಬಗ್ಗೆ ಸಂಶೋಧನಾ ಅಧ್ಯಯನ ನನ್ನ ವ್ಯಾಪ್ತಿಯಲ್ಲಿ ಅಧ್ಯಯನ ಮಾಡುತ್ತಾನೆ. ಆದರೆ ನನ್ನದೇ ಕೊನೆಯ ತೀರ್ಮಾನವಲ್ಲ.

ಅರಸಿಕೇರಿ ಗ್ರಾಮೀಣ ದೈವಗಳ ಬಗ್ಗೆ ಅಧ್ಯಯನವು ಗ್ರಾಮ ದೈವದ ಪದ ನಿಷ್ಪತ್ತಿ ಮತ್ತು ಪರಿಕಲ್ಪನೆಯಲ್ಲಿ ಚರಿತ್ರೆಯನ್ನ ಕಟ್ಟಿರುವುದು ಔಚಿತ್ಯವಾಗಿದೆ. ದೈವದ ಪರಿಕಲ್ಪನೆಯ ಹುಟ್ಟಿಗೆ ಭಯ, ಬೀತಿ ಕಾರಣದಿಂದ ದೇವತೆ ಎಂಬ ಪದ ಸ್ತ್ರೀಯನ್ನು ಮಾತ್ರ ಸೂಚಿಸದೇ ಪುರುಷ ದೈವತ್ವ ದೇವತೆಗಳನ್ನು ಪ್ರತಿನಿಧಿಸುತ್ತದೆ. ಪ್ರಪಂಚದಲ್ಲಿ ಮೊದಲು ಆರಾಧನೆಗೊಂಡದ್ದು ಸ್ತ್ರೀ ದೈವ. ಗ್ರಾಮೀಣ ಪ್ರದೇಶದಲ್ಲಿ ಮೊದಲು ಹುಟ್ಟಿಕೊಂಡಿದ್ದು ಸ್ತ್ರೀ ದೈವ. ಭಾರತದಲ್ಲಿ ಆರಂಭದಲ್ಲಿದ್ದ ದ್ರಾವಿಡರು ಮಾತೃ ಕುಟುಂಬಕ್ಕೆ ಪ್ರಾಧಾನ್ಯತೆ ಕೊಟ್ಟರು ಎಂಬುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬೇಕಾಗುತ್ತದೆ.

ಪ್ರಾಚೀನ ಕಾಲದಲ್ಲಿ ಮನುಷ್ಯ ತನ್ನ ಹಸಿವನ್ನು ಇಂಗಿಸಿಕೊಳ್ಳಲು ಬೆಟ್ಟ ಕಾಡುಗಳಲ್ಲಿ ತಿರುಗಿ ಗೆಡ್ಡೆ ಗೆಣಸುಗಳನ್ನು ತಿಂದು ಕಲ್ಲು ಪೊಟರೆಗಳಲ್ಲಿ ಜೀವನ ಸಾಗಿಸುತ್ತಿದ್ದನು. ಆ ಸಮಯದಲ್ಲಿ ಪ್ರಕೃತಿಯಲ್ಲಿ ಆಗುವ ಏರುಪೇರುಗಳನ್ನು ನೋಡಿ ಭಯಗೊಂಡು ತಮಗೆ ಕಾಣಿಸದ ಅದ್ಭುತ ಶಕ್ತಿಯಿದೆ. ಆ ಶಕ್ತಿಯನ್ನು ಶಾಂತಿ ಪಡಿಸದಿದ್ದರೆ ತಮಗೆ ವಿಪತ್ತು ಬಂದೊದಗುತ್ತದೆ ಎಂದು ತಿಳಿದುಕೊಂಡು, ಮನುಷ್ಯನ ಸುತ್ತ ಮುತ್ತಲಿನ ಪ್ರಕೃತಿಯ ವಿಸ್ಮಯ. ಕಾಡು, ಬೆಟ್ಟ , ಹೊಳೆ, ಕಡಲು, ಸೂರ್ಯ, ಚಂದ್ರ, ಬಿರುಗಾಳಿ ಮುಂತಾದ ಶಕ್ತಿಗಳು ಮನುಷ್ಯನನ್ನ ದೈವತ್ವದ ಕಡೆಗೆ ವಾಲಿಸಿ ಆರಾಧಿಸುವಂತೆ ಮಾಡುತ್ತವೆ. ಈ ದೈವಗಳು ದುಷ್ಠ ಶಕ್ತಿಗಳನ್ನು ಹತೋಟಿಯಲ್ಲಿಟ್ಟುಕೊಂಡು ಮಾನವನಿಗೆ ವಿಪತ್ತು ಬಾರದಂತೆ ರಕ್ಷಿಸುತ್ತವೆ. ಮನುಷ್ಯನ ಜೀವನದ ವ್ಯವಸ್ಥೆಯ ಬೇಟೆ, ಪಶುಪಾಲನೆ, ಕೃಷಿ ಕೈಗಾರಿಕೆ ವಿಭಿನ್ನ ಕ್ಷೇತ್ರಗಳನ್ನ ದಾಟಿ ಬಂದನು. ಸಮಾಜದಲ್ಲಿ ಜೀವನಕ್ರಮವು ಎಡಬಿಡದೆ ಬದಲಾವಣೆಯಾಗುವುದರ ಜೊತೆಗೆ ಮನುಷ್ಯನ ಬೌದ್ಧಿಕ ಮಟ್ಟ ಬೆಳೆದಂತೆಲ್ಲಾ ಆಲೋಚನೆಯ ವಿಚಾರ ವಿಕಾಸ ಹೊಂದುತ್ತದೆ. ಪ್ರಸ್ತುತವು ಜನಪದ ದೇವರುಗಳ ಪೂಜೆಗೆ ಚ್ಯುತಿ ಬಾರದಂತೆ ನಡೆದುಕೊಳ್ಳುತ್ತದೆ.

ಈ ದೈವಗಳ ಸಂಶೋಧನಾ ಅಧ್ಯಯನ ಬಹಳ ಅದ್ಭುತ ಹಾಗೂ ಅಷ್ಟು ಕಷ್ಟಕರವೂ ಹೌದು. ಏಕೆಂದರೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ವಿಷಯಗಳ ಕ್ರೋಢೀಕರಣ ಮಾಡುವಾಗ ಅನುಭವಿಸಿದ

ಅನುಭವಗಳೇ ಇದಕ್ಕೆ ನಿದರ್ಶನ. ದೇವರುಗಳ ಸುತ್ತಾ ಇರುವ ಪುರಾಣ, ಐತಿಹ್ಯ, ಒಗಟು ಇನ್ನು ಹಲವು ಕಾರಣಗಳು ಪ್ರಭಾವ ಬೀರುತ್ತವೆ. ಗ್ರಾಮೀಣ ದೈವಗಳನ್ನು ನಂಬುವವರಿಗೆ ಇವುಗಳ ಆಳವಾದ ಶೋಧನೆ ಮತ್ತು ಸವಿಸ್ತಾರದ ಬಗ್ಗೆ ತಿಳಿದುಕೊಳ್ಳುವ ಗೊಡವೆಗೆ ಹೋಗುವುದಿಲ್ಲ. ಏಕೆಂದರೆ ಆ ದೈವದೊಂದಿಗೆ "ಬದುಕಿನ ದೋಣಿ" ಸಾಗುತ್ತದೆ ಎಂಬುದು ಅವರ ನಂಬಿಕೆ. ಆದರೆ ದೈವತ್ವದ ಪರಿಕಲ್ಪನೆ ದೂರವಿದ್ದವನಿಗೆ ಗ್ರಾಮೀಣ ದೈವಗಳು ಜನಸಮೂಹವನ್ನು ಸೃಷ್ಟಿಸಿ ಆನಂತರ ಶಿಷ್ಟ ದೈವವಾಗಿ ರೂಪಹೊಂದುತ್ತವೆ. ಹೀಗೆ ಬದಲಾವಣೆ ಹೊಂದುತ್ತಾ ದೈವಗಳಿಂದಲೇ ಕಾರ್ಯ ಕಾರಣ ಸಂಬಂಧಗಳು ಧರೆಯಲ್ಲಿ ೮೪ ಕೋಟಿ ಜೀವ ಜಗತ್ತಿನ ಹಿಡಿತದಲ್ಲಿದೆ. ಎಂಬ ನಂಬಿಕೆ ಅವರಲ್ಲಿ ಬೆಳೆದು ಬರುತ್ತದೆ.

"ಜನಪದ ದೈವಗಳನ್ನು ಮೊದಲಿಗೆ ಮಾಹಿತಿ ರೂಪದಲ್ಲಿ ತಿಳಿಸಿಕೊಟ್ಟವರು ಮಾನವಶಾಸ್ತ್ರಜ್ಞರಲ್ಲಿ ಬ್ರಾಸೆಲ್ ಮೆಕಲ್‌ನ್ಯಾಸ್ ಪ್ರೇಜ್ ಮತ್ತು ಟೈಲರ್‌ಮಾರೆಟ್ ಮುಂತಾದವರು ೧೯೨೧ ರಲ್ಲಿ ಹೆನ್ನಿ ವೈಟ್ ಹೆಕರವರ "The Village of South India" ಕೃತಿಯಲ್ಲಿ ಗ್ರಾಮದೇವತೆಯ ಸಂವಾದಿಯಾಗಿ 'Village Godde' ಎಂಬ ಪದವನ್ನು ಬಳಸಿದರು. ಈ ಕೃತಿಯನ್ನು ಮುಖ್ಯವಾಗಿಟ್ಟುಕೊಂಡು. ನಮ್ಮ ಅನೇಕ ವಿದ್ವಾಂಸರು ಗ್ರಾಮದಲ್ಲಿ ಗ್ರಾಮದೇವತೆಯ ಆಚರಣೆಗಳು ಹೆಚ್ಚಾಗಿ ಇರುವುದರಿಂದಲೆ ಏನೋ ಆ ದೈವವನ್ನು ಗ್ರಾಮದೈವವೆಂದು ಕರೆದರು. ಕನ್ನಡದಲ್ಲಿ ಗ್ರಾಮದೇವತೆಯನ್ನು ಕುರಿತು ಅಧ್ಯಯನ ನಡೆಸಿದವರಲ್ಲಿ ಪ್ರಮುಖವಾಗಿ ಡಾ. ಚನ್ನಣ್ಣ ವಾಲಿಕಾರ ಮತ್ತು ಡಾ.ಸಿದ್ದಲಿಂಗಯ್ಯನವರ ಹೆಸರುಗಳನ್ನು ಹೆಸರಿಸಬಹುದು. ವಾಲಿಕಾರ ಹೈದ್ರಾಬಾದ್ ಕರ್ನಾಟಕದ ಗ್ರಾಮದೇವತೆಗಳು ಎಂಬ ವಿಷಯದ ಮೇಲೆ ಸಂಶೋಧನೆ ನಡೆಸಿದರೆ ಡಾ. ಸಿದ್ದಲಿಂಗಯ್ಯ ತಮ್ಮ ಕೃತಿಗೆ "ಗ್ರಾಮದೇವತೆ ಎಂಬ ಪದವನ್ನು ಬಳಸಿದ್ದಾರೆ. ಆದರೆ ಡಾ. ಡಿ.ಬಿ. ನಾಯಕ ಹಾಗೂ ಇತರ ವಿದ್ವಾಂಸರು "ಶಕ್ತಿ ದೇವತೆ" ಎಂಬ ಅರ್ಥ ಸೂಚಿಸುವ ಪದ ಪ್ರಯೋಗದಿಂದ ಅಧ್ಯಯನ ಮಾಡಿದ್ದಾರೆ ಒಂದು ಮನೆಯಲ್ಲಿರುವ ದೈವ ಮನೆದೈವವೆಂದು ಕರೆದರೆ ಆ ಗ್ರಾಮದ ಆದಿ ದೈವವಾಗಿ ಪೂಜಿಸಲ್ಪಡುವ ದೈವವು ಗ್ರಾಮದೈವವೆಂದು ಕರೆಯುವರು"[೨]

ನನ್ನ ಅಧ್ಯಯನದಲ್ಲಿ 'ಅರಸಿಕೇರಿ ದಂಡಿನ ದುರುಗಮ್ಮ' ಈ ವಿಷಯಕ್ಕೆ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಜನಪದ ದೈವಗಳ ಸಮೂಹ 'ಜನಪದ ದೈವ' ಎಂಬ ವಿಷಯದಲ್ಲಿ ಅಧ್ಯಯನ ಮಾಡಲು ನಿರತನಾಗಿದ್ದೇನೆ. ಭಾರತ ದೇಶವು ಗ್ರಾಮೀಣ ಪ್ರದೇಶಗಳಿಂದ ಕೂಡಿದ ಧಾರ್ಮಿಕ ನಂಬಿಕೆಯುಳ್ಳ ಪ್ರದೇಶ ರಂದು ಹೇಳಬಹುದು. ದೈವತ್ವದ ಪರಿಕಲ್ಪನೆಯು ಅವರ ಬದುಕಿನಲ್ಲಿ ಅಗೋಚರವಾದ ಶಕ್ತಿ ಅದ್ಭುತ ಸೃಷ್ಟಿ ಎನ್ನುವ ಅಂಶವನ್ನು ಮನಗಾಣಬೇಕಾದರೆ ಕಾಲದಲ್ಲಿ ಗರ್ಭಿಕರಿಸಿಕೊಂಡಿರುವ ದಿನಮಾನವನ್ನು ನೋಡಿದರೆ ಗೋಚರವಾಗುತ್ತದೆ. ಜನಪದರ ದೃಷ್ಟಿಯಲ್ಲಿ ದೈವತ್ವ ಎನ್ನುವುದು "ಸಾಗರದಲ್ಲಿ ಸಾಗುವ ದೋಣಿಗೆ ಹರಿಗೋಲು ಎಷ್ಟು ಮುಖ್ಯವೋ ಅಷ್ಟೇ ಮುಖ್ಯ, ಜನಪದರ ಬದುಕಿನ ದೈವತ್ವದ ಪಾತ್ರ ಪ್ರಾಚೀನ ಕಾಲದಲ್ಲಿ ಮಹತ್ವ ಪಡೆದುಕೊಂಡಿದೆ.

ಸಾಮಾಜಿಕವಾಗಿ ಹೇಳುವುದಾದರೆ ಮಡಿ ಮೈಲಿಗೆ ಅಥವಾ ಕನಿಷ್ಠ ಶ್ರೇಷ್ಠ ಎನ್ನುವ ಮನೋಧರ್ಮ ಅಂದಿನ ಸಮಾಜದಲ್ಲಿ ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಇಂತಹ ದಿನಮಾನಗಳಲ್ಲಿ ಈ ದಂಡಿನ ದುರುಗಮ್ಮನ ಪೂಜಾ ಕಾರ್ಯಕ್ರಮಗಳನ್ನು ನೆರವೇರಿಸುವ ಅರ್ಚಕ ವರ್ಗದವರು ದಲಿತರಾದರು. ಈ ಅರ್ಚಕ ಪಾದಸ್ಪರ್ಶವನ್ನು ಮಾಡಿಕೊಂಡರೆ ನಮ್ಮಲ್ಲಿರುವ ಪಾಪಕರ್ಮಗಳು, ರೋಗರುಜನಿಗಳು ಬಂದಿರುವ ಕಷ್ಟ ಕಾರ್ಪುಣ್ಯಗಳು ಪರಿಹಾರವಾಗುತ್ತವೆ. ಎನ್ನುವ ನಂಬಿಕೆ ಈ ಭಾಗದ ಎಲ್ಲಾ ವರ್ಗದವರ ಮನೋಧರ್ಮವಾಗುತ್ತದೆ.

ಈ ಹಿನ್ನೆಲೆಯಲ್ಲಿ ವಿವೇಚಿಸುವುದಾದರೆ ಸಮಾಜದ ಮೇಲ್ ವರ್ಗದ ಜನರು ಪುರುಷ ದೈವ ಮತ್ತು ಶಿಷ್ಠ ದೈವದ ಮೊರೆ ಹೋದರೆ, ಬುಡಕಟ್ಟು ವರ್ಗಗಳ ಜನರು ಸ್ತ್ರೀ ದೈವತ್ವದ ಮೊರೆ ಹೋಗುತ್ತಾರೆ. ಎಕೆ ಎನ್ನುವ ಪ್ರಶ್ನೆ ನನ್ನದು? ಪ್ರಾಚೀನ ಕಾಲವನ್ನು ಅವಲೋಕಿಸಿದಾಗ ದ್ರಾವಿಡರು ಮಾತೃ ಪ್ರಧಾನ ಸಮಾಜವನ್ನ ಸೃಷ್ಠಿಸಿದರೆ ಆರ್ಯರು ಪಿತೃಪ್ರಧಾನವಾದ ಕುಟುಂಬದ ವ್ಯವಸ್ಥೆಯನ್ನು ಸೃಷ್ಠಿಸಿಕೊಂಡರು. ಕೈತೋಟವನ್ನು ಮಾಡುವುದರ ಮೂಲಕ ಸ್ತ್ರೀಯು ಕೃಷಿಯನ್ನೆ ಮೊದಲು ಕಂಡುಕೊಂಡವಳು. ಭೂಮಿಯು ಸೃಷ್ಠಿ ಶಕ್ತಿಯನ್ನ ಹೊಂದಿದ ಹಾಗೆ ಹೆಣ್ಣು ಕೂಡ ಸೃಷ್ಠಿಶಕ್ತಿಯನ್ನೆ ಹೊಂದಿದ್ದಾಳೆ. ಈ ಪರಿಕಲ್ಪನೆ ಮೂಲಕ ಹೆಚ್ಚಾಗಿ ಸ್ತ್ರೀ ದೈವತ್ವ ಮೊರೆ ಹೋಗುತ್ತಾರೆ. ಇವಳು ಎಲ್ಲಾ ದೃಷ್ಟ ಶಕ್ತಿಗಳ ನೇತಾರಳಲ್ಲದೇ ಮನುಷ್ಯರ ಮತ್ತು ಪ್ರಾಣಿಗಳ ಸಂರಕ್ಷಕಳಾಗಿದ್ದಾಳೆ. ಯುದ್ಧದಲ್ಲಿ ಜನರನ್ನು ಕಾಪಾಡುವಳು. ಸಂಕಷ್ಟದಲ್ಲಿರುವವರನ್ನ ಪೋಷಿಸುವ ಹೊಣೆಗಾರಿಕೆ ಇವಳದ್ದಾಗಿದೆ. ಈ ಅಧ್ಯಯನದಿಂದ ನನ್ನ ಕ್ಷೇತ್ರ ಸಂದರ್ಭದಲ್ಲಿ ಕಂಡುಕೊಂಡ ದೈವತ್ವದ ಪರಿಕಲ್ಪನೆ ಗ್ರಾಮೀಣರಲ್ಲಿರುವುದು ತಿಳಿದು ಬರುತ್ತದೆ.

"ಆಧುನಿಕ ನಾಗರೀಕತೆಯ ತರ್ಕ ಒಂದು ಏಕರೂಪಿ ಜೀವನಕ್ರಮವನ್ನು ರೂಪಿಸುವುದಾಗಿದೆ. ಜ್ಞಾನ ವ್ಯವಸ್ಥೆಗಳ ಭಾವನಾಲಯಗಳ ತೀವ್ರ ರೀತಿಯ ಹಿಂಸೆಯನ್ನು ಅನುಭವಿಸಿ ಕಣ್ಮರೆಯಾಗುತ್ತಿವೆ. ಗ್ರಾಮದೇವತೆಗಳು ಶೀಘ್ರವಾಗಿ ಕಣ್ಮರೆಯಾಗುತ್ತಿರುವುದನ್ನು ಕೂಡಾ ಈ ನಾಗರಿಕತೆಯ ತರ್ಕದಲ್ಲೇ ನೋಡಲಾಗಿದೆ. ಆಧುನಕ ಬಂಡವಾಳಶಾಹಿ ನಾಗರೀಕತೆಯು ತನಗಿಂತ ಭಿನ್ನವಾದ ಲೋಕಗ್ರಹಿಕೆ, ನಂಬಿಕೆ, ಆಚರಣೆ ಕ್ರಮಗಳನ್ನು ನಿರ್ಧಯವಾಗಿ ಹೊಸಕಿ ಹಾಕುತ್ತವೆ. ಆಧುನೀಕರಣ ಸಂದರ್ಭದಲ್ಲಿ ಗ್ರಾಮದೇವತಾ ವ್ಯವಸ್ಥೆ ಸೂಚಿಸುತ್ತಿರುವ ಮೌಲ್ಯಗಳು ಹಾಗೂ ಎದುರಿಸುತ್ತಿರುವ ಸಮಸ್ಯಗಳು ಈ ಕೆಳಗಿನಂತಿವೆ.

ಗ್ರಾಮದೇವತೆಗಳು ಸ್ತ್ರೀಚೈತನ್ಯ ಶಕ್ತಿಯ ಆರಾಧನೆ ಎಂದರೆ ತಪ್ಪಾಗಲಾರದು. ಕೆಳವರ್ಗದ ಲೋಕವನ್ನು ನೋಡುವ ಕ್ರಮವನ್ನು ಸೂಚಿಸುತ್ತವೆ. ಸ್ಥಳೀಯ ಮೂಲದಿಂದ ಬಂದ ಗ್ರಾಮದೇವತೆಗಳ ಅರ್ಚಕರು ಸಾಮಾನ್ಯವಾಗಿ ಕೆಳ ಜಾತಿಗೆ ಸೇರಿದವರಾಗಿರುತ್ತಾರೆ. ಆದ್ದರಿಂದ ಗ್ರಾಮದೇವತೆಗಳು ಇಷ್ಟಪಡುವ ಆಹಾರವು ಕೆಳವರ್ಗದ ಪದ್ದತಿಗೆ ಸಂಬಂಧಿಸಿದ್ದೇ ಆಗಿರುತ್ತದೆ. ಆಯಾ ಜನಾಂಗದ ಭಾಷೆ ಉಪಭಾಷೆಗಳೇ ಬಳಕೆಯಾಗುವುದನ್ನು ಕಾಣಬಹುದು. ಹೀಗೆ ಗ್ರಾಮದೇವತೆಗಳು ತಮ್ಮ

ಸಮಾಜದ ವೈದಿಕೇತರ ಜನವರ್ಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಗ್ರಾಮದೇವತೆಯ ಪರಿಕಲ್ಪನೆ[10] ಮೂರು ನೆಲೆಯಲ್ಲಿ ಕ್ರೀಯಾಶೀಲವಾಗಿದೆ. ಅವು ಮನುಷ್ಯ ಮತ್ತು ಸಮಾಜ, ಮನುಷ್ಯ ಮತ್ತು ಮನುಷ್ಯ, ಮನುಷ್ಯ ಮತ್ತು ನಿಸರ್ಗ ಸಂಬಂಧ ನೆಲೆಯಲ್ಲಿ ಗ್ರಾಮದೇವತೆಯ ಪರಿಕಲ್ಪನೆ ಪ್ರಕೃತಿಯ ವಿವಿದ ವ್ಯಾಪಾರಗಳ ಆರಾಧನೆಯಾಗಿದೆ. "ಗ್ರಾಮದೇವತೆಯ ಕಲ್ಪನೆ ಮಾನವನ ತನ್ನ ಸಾಂಘಿಕ ಜೀವನದಲ್ಲಿ ಗ್ರಾಮಗಳನ್ನು ಕಟ್ಟಿಕೊಂಡ ನಂತರದ ಈ ಪರಿಕಲ್ಪನೆಯು ವಿಸ್ತರಣೆಯಾದಂತೆಲ್ಲಾ ಶಿಷ್ಠ ದೈವಗಳ ಸಂಪರ್ಕ ಇವುಗಳಿಗೆ ಒದಗಿ ಬಂದ ಅವುಗಳ ಬದಲಾವಣೆಗೆ ಒಳಗಾಗುತ್ತದೆ. ಈ ಬದಲಾವಣೆ ಮುಖ್ಯವಾಗಿ ಕಂಡುಬರುವುದು ವೈದಿಕರಣದಲ್ಲಿ ಹೀಗೆ ವೈದಿಕರಣಕ್ಕೆ ಪಕ್ಕಾಗುವ ಗ್ರಾಮದೇವತೆಗಳ ಸ್ವರೂಪಗಳಲ್ಲಿ ಗುಣ ಸ್ವಭಾವಗಳಲ್ಲಿ ಅಪಾರವಾದ ಬದಲಾವಣೆಗಳಿಗೆ ಒಳಗಾಗುತ್ತದೆ. ವೈದಿಕ ಅರ್ಚಕರ ಸಂಪರ್ಕ ಬಂದ ಕೂಡಲೇ ಗ್ರಾಮ ದೇವತೆಗಳ ಕಿವಿಯ ಮೇಲೆ ಸಂಸ್ಕೃತ ಮಂತ್ರಘೋಶಗಳು ಬೀಳಲು ಪ್ರಾರಂಭವಾಗಿವೆ. ಜನಪದರ ಅರ್ಚಕ ವಿಧಾನವೇ ಕಣ್ಮರೆಯಾಗುತ್ತದೆ. ಕೋಣ, ಕುರಿ, ಕೋಳಿಗಳ ಬಲಿಯ ಬದಲು ತೆಂಗಿನಕಾಯಿ, ಬಾಳೆಹಣ್ಣು, ಮೃಷ್ಠಾನ್ನ ಭೋಜನ ನೈವೇದ್ಯವಾಗುತ್ತದೆ. ಕೆಲವು ಹಳ್ಳಿಗಳಲ್ಲಿ ಕೋಣನ ಮೈಗೆ ಭರ್ಚಿಯನ್ನು ಚುಚ್ಚಿ ಅದರ ಮೈಯಿಂದ ರಕ್ತ ತೆಗೆಯುವ ಪದ್ಧತಿ ಆರಂಭವಾಗಿದೆ. ಈ ಹಿಂಸೆಯ ಪರಿಕಲ್ಪನೆ ಪ್ರಭಾವವು ಕಾರಣವಿರಬಹುದು. ದೇವತೆಗಳಿಗೆ ಬೆಳ್ಳಿ, ಬಂಗಾರ, ಉಡುಗೆ ತೊಡುಗೆ ಆರಂಭವಾಗುತ್ತವೆ. ಅನೇಕ ಸಂದರ್ಭದಲ್ಲಿ ದೇವತೆಗಳಿಗೆ ಹೆಸರೇ ಬದಲಾವಣೆಯಾಗುತ್ತದೆ. ಕಾಳಮ್ಮ, ಕಾಳಿಕಾ ಎಂಬ ಹೆಸರು ಮೂಕಮ್ಮ, ಮೂಕಾಂಬಿಕಾ ಹೀಗೆ ಉಡುಚಮ್ಮ ಉಡುಚಲಮ್ಮ ಎಂಬ ಹೆಸರೇ ಪಡೆಯುತ್ತಾರೆ"[11]

ಆಧುನಿಕ ಜಗತ್ತಿನಲ್ಲಿ ಪ್ರಾಚೀನ ಸಂಪ್ರದಾಯ, ರೂಢಿ, ನಂಬಿಕೆ, ಆಚರಣೆಗಳು ದೈವತ್ವದ ಪರಿಕಲ್ಪನೆಯು ನಾಗರೀಕತೆಯ ಪ್ರಭಾವದಿಂದ ಕಳಚಿಕೊಂಡು ತನ್ನದೇ ಆದ ಪರ್ಯಾಯ ರೂಪವಾಗಿ ಹೊರಹೊಮ್ಮುತ್ತಿದೆ. ದೈವತ್ವದ ಆಚರಣೆಗಳು ಬತ್ತಲೆ ಸಂಪ್ರದಾಯ(ಉಟ್ಟಿಗೆ ಉಡುವುದು) ಜಾತ್ರೆ ಹಬ್ಬ, ಹರಿದಿನಗಳಲ್ಲಿ ಮುಗ್ಧ ಜನರು ಭಕ್ತಿಪೂರ್ವಕವಾಗಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾರೆ. ಇವು ಸ್ವಲ್ಪ ಮಟ್ಟಿಗೆ ಕಡಿಮೆಯಾಗುತ್ತಿವೆ. ಆದರೆ ಅರಸಿಕೇರಿ ಅಂತೂ ನಾಗರೀಕತೆಯ ಪ್ರಭಾವಕ್ಕೊಳಗಾಗಿಲ್ಲ. ಆಚರಿಸುವ ರೀತಿ ಭಿನ್ನವಾಗಿರುತ್ತದೆ. ಜಾತ್ರೆಯಲ್ಲಿ ಸಾಮೂಹಿಕ ಭೋಜನವಿರುತ್ತದೆ. ಈ ಭೋಜನೆಯು ಪ್ರಸ್ತುತ ದಿನಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಾಗಿದೆ.

ಹೊಳೆಯಿಂದ ಬರುವಾಗ ಬಲಿಯನ್ನು ಕೊಡುತ್ತಾರೆ. ಅದು ಪ್ರಸ್ತುತ ದಿನಗಳಲ್ಲಿ ಆಯಗಾರರಿಗೆ ಕೊಡುವ ಕ್ರಮವು ಬದಲಾವಣೆಯಾಗಿದೆ. ಈ ದೇವಿಯ ಆರಾಧನೆ ಮಾಡುವ ಅರ್ಚಕರಿಗೆ ಪ್ರತ್ಯೇಕವಾಗಿ ರುದ್ರಭೂಮಿಯಿದೆ. ಅದರಲ್ಲಿ ಅದೇ ಕುಟುಂದ ಸ್ತ್ರೀಯರಿಗೆ ಅವಕಾಶವಿಲ್ಲ. ಅಂದರೆ ದ್ರಾವಿಡರ ನಂತರ ಬಂದ ಆರ್ಯರ ಪ್ರಭಾವದಿಂದ ಪುರುಷ ಸಮಾಜ ನಿರ್ಮಿತವಾಗಿದೆ. ಹಾಸ್ಯಾಸ್ಪದವೆಂದರೆ ದೇವಿಯ ಸೇವೆಗೆ ಜೋಗತಿಯರು (ದೇವದಾಸಿಯರು) ಬೇಕು. ರಾಸವಾಳದಲ್ಲಿ ಇವರಿಗೆ ಪ್ರಮುಖಸ್ಥಾನವಿದೆ.

ಅವರು ಪ್ರಸಾದ ಮುಟ್ಟಿದ ನಂತರ ಎಲ್ಲರೂ ಸೇವಿಸುತ್ತಾರೆ. ಅಂದರೆ ದ್ರಾವಿಡ ಸಂಸ್ಕೃತಿಯ ಪ್ರತೀಕ ಆರಾಧನೆಯಲ್ಲಿ ಪ್ರಮುಖವಾಗಿ ಪರಿಶಿಷ್ಠ ವರ್ಗದಲ್ಲಿ ಶ್ರೇಷ್ಠ ಸ್ಥಾನವಿದ್ದು, ಈ ಶ್ರೇಷ್ಠರ ಶವಸಂಸ್ಕಾರ ಮಾಡಲು ಅವಕಾಶವಿಲ್ಲ. ಈ ದೈವತ್ವದ ನೆಪದಲ್ಲಿ ಶೋಧಿಸುತ್ತಾ ಹೋದರೆ ಸ್ತ್ರೀ ದೈವತ್ವದ ಪ್ರತಿನಿಧಿಯಾಗಿದ್ದ ದೇವದಾಸಿಯು ಹಿಂದಿನ ದಿನಮಾನಗಳಲ್ಲಿ ಪೂಜಾರಿಣಿಯಾಗಿದ್ದಳು. ಆರ್ಯರ ಪ್ರಭಾವದಿಂದ ಪುರುಷನಿರ್ಮಿತ ಸಮಾಜದಲ್ಲಿ ಕೆಳವರ್ಗದವರ ಸ್ತ್ರೀಯರನ್ನ ಲೈಂಗಿಕ ಸುಖಕ್ಕಾಗಿ ಬಳಸಿಕೊಳ್ಳುವುದು. ಈ ತಂತ್ರವನ್ನು ನೋಡಿದರೆ ಮುಗ್ಧ ಜನಪದರನ್ನು ದೈವತ್ವದಲ್ಲಿ ಸ್ತ್ರೀಯರ ಬದುಕನ್ನು ನರಕ ಮಾಡುವ ಈ ವ್ಯವಸ್ಥೆ ಸ್ಥರವನ್ನು ಹಿಡಿದು ವಿವೇಚಿಸುತ್ತಾ ಹೋದರೆ ಕುತೂಹಲಕರ ಸಂಗತಿಗಳನ್ನ ತಿಳಿಯಬಹುದು.

"ಮನಸ್ಮೃತಿಯಂತಹ" ಗ್ರಂಥದಲ್ಲಿ ಪರಿಶಿಷ್ಠ ವರ್ಗದ ಮುಗ್ಧಜನರನ್ನು ನಿಕೃಷ್ಟವಾಗಿದೆ. ಬಳಕೆ ಮಾಡಿಕೊಂಡಿರುವುದನ್ನು ನೋಡಿದರೇ ಪುರೋಹಿತಶಾಹಿ ವರ್ಗದವರು ತಮ್ಮ ಅನುಕೂಲಕ್ಕೆ ತಕ್ಕಂತೆ ನಿಯಮಗಳನ್ನು ರೂಪಿಸಿಕೊಂಡ ತಂತ್ರವು ತಿಳಿದು ಬರುತ್ತದೆ. ಈ ತಂತ್ರ ಬಲೆಯನ್ನು ಬಿಸುವಲ್ಲಿ ಶ್ರೇಯಸ್ಸು ತಮ್ಮದಾಗಿಸಿಕೊಂಡಿದ್ದಾರೆ. ದೇವತೆ ಸಂಕೇತವಾಗಿ ಇಂದು ಗ್ರಾಮೀಣ ಪ್ರದೇಶದಲ್ಲಿ ಮುಖಂಡರು, ವಿವಿಧ ರಾಜಕೀಯ ನಾಯಕರು, ಪಕ್ಷದ ಪ್ರತಿನಿಧಿಗಳು ಅಧಿಕಾರ ಚಲಾಯಿಸುತ್ತಾರೆ. ಗ್ರಾಮೀಣ ಜನತೆಯಲ್ಲಿ ಅನೇಕ ರೀತಿಯ ಸಮಸ್ಯೆ, ಜಗಳ, ಸಂಕಟ ಇತ್ಯಾದಿಗಳಿಗೆ ಇದು ಪಾರಂಪರಿಕವಾಗಿ ತಂತ್ರಜ್ಞಾನದ ಅವಿಭಾಜ್ಯ ಅಂಗವಾಗಿ ಗ್ರಾಮದೇವತೆಯು ಕಾಣುತ್ತಿದ್ದಳು. ಹಿಂದಿನ ದಿನಗಳಲ್ಲಿ ರೋಗಕ್ಕೆ ತುತ್ತಾದರೆ ಮದ್ದು ಕೊಡಿಸುವುದು ಎಷ್ಟು ಅವಶ್ಯವಾಗಿತ್ತೋ, ಅಷ್ಟೇ ಅನಿವಾರ್ಯ ಗ್ರಾಮದೇವತೆಗೆ ಹರಕೆ ಹೋರುವುದು ಮುಖ್ಯವಾಗಿತ್ತು. ಆದರೆ ನಾಗರೀಕತೆಯ ಪ್ರಭಾವದಿಂದ ಪರ್ಯಾಯ ವ್ಯವಸ್ಥೆಯು ಹುಟ್ಟಿಕೊಳ್ಳುತ್ತಿದ್ದಂತೆ ಗ್ರಾಮದೇವತೆಯ ಕೃಪಾಶಕ್ತಿ ಈ ತಂತ್ರಜ್ಞಾನದ ಪ್ರಭಾವದಿಂದ ಪಾತ್ರ ಗೌಣವಾಗಿದೆ. ಶಿಷ್ಟಮೌಲ್ಯಗಳ ಪ್ರಭಾವದಿಂದ ಜನಪದರ ಮೌಲ್ಯಗಳು ಅಸ್ತಿತ್ವವನ್ನು ಕಳೆದುಕೊಳ್ಳುವುದರ ಜೊತೆಗೆ ದೈವಗಳ ಸಂಬಂಧ ಕಡಿಮೆಯಾಗುತ್ತಿದೆ. ಇಂದಿನ ವೈಜ್ಞಾನಿಕ ಯುಗದಲ್ಲಿ ಜನಪದ ಆಚರಣೆಗಳು ದಿನದಿಂದ ದಿನಕ್ಕೆ ಅವು ಅವನತಿ ಹೊಂದುತ್ತಿವೆ.

### ಅಧ್ಯಯನದ ಮಹತ್ವ

ಗ್ರಾಮದಲ್ಲಿರುವ ದೇವತೆಗಳಿಗೆ ಸಂಬಂಧಿಸಿದ ಹಾಗೂ ಅಲ್ಲಿನ ಜನಪದರಲ್ಲಿ ಬಹುದಿನಗಳಿಂದಲೂ ಬೆಳೆದು ಬಂದ ಆಚರಣೆಗಳು ತುಂಬಾ ಮಹತ್ವವನ್ನು ಪಡೆದುಕೊಂಡಿರುತ್ತವೆ. ಪ್ರಸ್ತುತ ಗ್ರಾಮಗಳು ಆಧುನಿಕ ನಾಗರೀಕತೆಯ ಕೈಗಾರಿಕೀಕರಣ, ಖಾಸಗೀಕರಣಗಳ ಪ್ರಭಾವಕ್ಕೊಳಗಾಗಿ ಸಂಸ್ಕೃತಿಯು ವಿಕಾಸ ಹೊಂದುತ್ತದೆ. ಇಂತಹ ಸಂಕ್ರಮಣವ್ಯವಸ್ಥೆಯ ಸಂದರ್ಭಧಲ್ಲಿ ಮೂಲೆಗುಂಪಾಗುತ್ತಿರುವ ಗ್ರಾಮೀಣ ಪರಿಸರ ಹಾಗೂ ಆಯಾ ದೇವತೆಗಳಿಗೆ ಸಂಬಂಧಿಸಿದ ಆಚರಣೆಗಳ ಕುರಿತಾಗಿ ಅಧ್ಯಯನ ಮಾಡುವ ಕೆಲಸ ಬಹಳ ಮಹತ್ವವನ್ನು ಪಡೆದುಕೊಳ್ಳುತ್ತದೆ.

ಈಗಾಗಲೇ ಈ ದೇವತೆಗೆ ಸಂಬಂಧಿಸಿದ ನಾಟಕವನ್ನು ದೇವಸ್ಥಾನ ಮಂಡಳಿಯವರು ಜಾತ್ರೆ, ಹಬ್ಬಗಳ ದಿನದಂದು ಪ್ರದರ್ಶನ ಮಾಡುತ್ತಾರೆ. ಈಗ ಪ್ರಸ್ತುತಪಡಿಸಿದ ಪ್ರಯೋಗಗಳು ೨೬೪ ಕ್ಕೂ ಹೆಚ್ಚಾಗಿವೆ. ನನ್ನ ಸಂಶೋಧನಾ ಅಧ್ಯಯನಕ್ಕೆ ಕೆಲವು ಮಾಹಿತಿಗಳನ್ನು ಬಿಟ್ಟರೆ ಅಂತಹ ಮೂಲ ದಾಖಲಾತಿಗಳು ನಾಟಕದಲ್ಲಿ ಸಿಕ್ಕಿಲ್ಲ. ಅರ್ಚಕ ವಂಶದವರ ಕುಟುಂಬದ ಆಸ್ತಿಯ ಕದನ ವಿಷಯವನ್ನು ವಸ್ತುವನ್ನಾಗಿ ಹೆಣೆದುಕೊಂಡು ಹೋಗಿದ್ದಾರೆ. ಅಲ್ಲದೇ ಕೆಲವು ರಾಜಕೀಯ ಸಂಬಂಧಗಳನ್ನು ಬಿಟ್ಟರೆ ಮತ್ತೇನಿಲ್ಲ. ಅರ್ಚಕರ ಹೋರಾಟವನ್ನು ದೈವತ್ವದ ಲೇಪನಮಾಡಿ ವಿಷಯವನ್ನು ಕ್ರೋಢೀಕರಿಸಿದ್ದಾರೆ. ಮಹತ್ವಪೂರ್ಣವಾದ ದೇವಿಯ ಚರಿತ್ರೆಗೆ ಪೂರಕವಾಗುವ ಜನಪದ ಗೀತೆ ಮಹತ್ವದ ವಿಷಯವಾಗುತ್ತದೆ. ಆದ್ದರಿಂದ ಪ್ರಸ್ತುತ ಸಂಪ್ರಬಂಧದ ಮಹತ್ವವೆಂದರೆ ಸದರಿ ದೇವತೆಗೆ ಸಂಬಂಧಿಸಿದ ಸಾಂಸ್ಕೃತಿಕವಾದ ವಿಧಿ ವಿಧಾನಗಳನ್ನು ಹಾಗೂ ಅವುಗಳ ಆಚರಣೆಗಳ ಜೊತೆಗೆ ಗ್ರಾಮದ ಸಂಕ್ಷಿಪ್ತ ಪರಿಚಯವನ್ನು ಮಾಡುತ್ತೇನೆ. ಈ ವಿಷಯಕ್ಕೆ ಬೇಕಾದ ಸಂಪೂರ್ಣ ಮಾಹಿತಿಯನ್ನು ಸಂಗ್ರಹಿಸಲು ನೇರವಾಗಿ ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿನ ಭೌಗೋಳಿಕ ಪರಿಸರವನ್ನು ನೋಡಿ ಸ್ಥಳೀಯರ ಅಭಿಪ್ರಾಯಗಳನ್ನು ಕ್ರೋಢೀಕರಿಸಲಾಗಿದೆ. ಅಲ್ಲದೆ ಸಂಪ್ರಬಂಧ ಬರವಣಿಗೆಗೆ ಪರೋಕ್ಷವಾಗಿ ನೆರವಾಗುವ ಕೆಲವು ಪುಸ್ತಕಗಳ ಸಹಾಯ ತೆಗೆದುಕೊಂಡಿದ್ದೇನೆ. ಜೊತೆಗೆ ಅಗತ್ಯವೆನಿಸಿದ ಕೆಲವು ಕಡೆಗಳಲ್ಲಿ ವಿಷಯ ವಿಶ್ಲೇಷಣೆ ಮಾಡಲಾಗಿದೆ. ಒಟ್ಟಾರೆ ಪ್ರಬಂಧವು ದಂಡಿದುದರುಗಮ್ಮನ ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಾಥಮಿಕ ಮಾಹಿತಿಯನ್ನ ಒದಗಿಸುತ್ತವೆ ಎಂದು ಭಾವಿಸಿರುತ್ತೇನೆ.

**ಟಿಪ್ಪಣಿಗಳು**

೧. ಮಂಜುನಾಥ ಬೇವಿನಕಟ್ಟಿ , ಮಾತಂಗಿ ೧೯೯೬, ಪುಟ-೧

೨. ಸವಿತಾ ಸಂಡೂರು ಪರಿಸರದ ಗ್ರಾಮ ದೈವಗಳು – ೨೦೦೬ ಪುಟ – ೬

೩. ಸಿದ್ದಲಿಂಗಯ್ಯ ಗ್ರಾಮ ದೇವತೆ ೧೯೯೪ – ಪುಟ –೧೧೬

೪. ಸಿದ್ದಲಿಂಗಯ್ಯ ಗ್ರಾಮ ದೇವತೆ ೧೯೯೪ – ಪುಟ– ೧೧೭

# ಅಧ್ಯಾಯ ೧

# ಅರಸಿಕೇರಿ ಚಾರಿತ್ರಿಕ ನೋಟ

**ಪದನಿಷ್ಪತ್ತಿ**

ಅರ –> ಖಡ್ಗ

ಅರಸು –> ರಾಜ ಅಥವಾ ದೊರೆ

ಅರಸಿ –> ರಾಣಿ –>

ಕೆರೆ –> ನೀರು ಸಂಗ್ರಹಿಸುವ ಕಟ್ಟೆ

ಅರಸಿ + ಕೇರಿ = ಅರಸಿಕೇರಿ

ಇದರ ಮೂಲ ಹೆಸರು ನೋಣಂಬನರಸಿಕೇರಿ, ಪ್ರಾಚೀನ ಕಾಲದಲ್ಲಿ ನೊಣಂಬರ ಆಳ್ವಿಕೆಗೆ ಒಳಪಟ್ಟಿತ್ತು. ನಂತರ ಪಾಂಡ್ಯರ ಆಳ್ವಿಕೆಗೆ ಒಳಪಟ್ಟಿತ್ತು. ಆಗ ಆ ವಂಶದ ಅರಸಿ ಆಡಳಿತವನ್ನ ನೆಡೆಸುತ್ತಿದ್ದಳು.

"ಕ್ರಿ ಶ. ೧೧೬೨ ರಲ್ಲಿ ಕಲಚೂರ್ಯರ ಶಾಸನದಲ್ಲಿ ಕೋಗಳಿ ೫೦೦ ಬಿಕ್ಕಿಗನೇಳ್ಪತ್ತರ ಉಪ ವಿಭಾಗದಲ್ಲಿ ಅರಸಿಕೇರಿ ಒಂದಾಗಿತ್ತು. ಶಾಸನದಂತೆ ಮುತ್ತಿಗೆ ಮೂವತ್ತರಲ್ಲಿದ್ದರಸಿಕೇರಿ ನೊಳಂಭೇಶ್ವರ ದೇವರಿಗೆ ವಾರೇಶ್ವರ ಪಂಡಿತರ ಕಾಲು ತೊಳೆದು ಚಾವುಂಡಮಯ್ಯ ನಾಯಕ ದತ್ತಿಯನ್ನು ಗುಡಿಯ ದೇವರ ಸೇವೆಗೆ ಕೊಟ್ಟಿರುವರು. ಕಾಲ ವಿಕ್ರಮ ವರ್ಷ ಮೂವತ್ತೆರಡರಲ್ಲಿ ಕ್ರಿ.ಶ.೧೧೧೨ ಡಿಸೆಂಬರ್ ಮೂವತ್ತರ ಸೋಮವಾರ ವಿಜಯನಗರವನ್ನು ಶ್ರೀ ಕೃಷ್ಣ ದೇವರಾಯ ಆಳುತ್ತಿದ್ದಾಗ ಅಂದರೆ ಕ್ರಿ.ಶ.೧೫೨೩ ರಲ್ಲಿ ಚಿನ್ನಾ ಭಂಡಾರಿಯಾದ ತಿಮ್ಮರಸನ ಮಗ ನಾರಾಯಣಪ್ಪ ರಾಯಸದ ಕೆಲಸ ಮಾಡುತ್ತಿದ್ದನು. ನೊಣಂಬನ ಕೊಟ್ಟೂರು ಸೀಮೆಗೆ ಸೇರಿತು. ನಾಗರಸನು ಕೊಟ್ಟೂರು ಸೀಮೆಗೆ ಪಾರುಪತ್ಯದಾರನಾಗಿದ್ದನು. ರಂಗದಾಸನ ಪುತ್ರ ತಿಮ್ಮರಸನು ನಾಗರಸನ ಆದೇಶದ ಮೇರೆಗೆ ಅರಸಿಕೇರಿಯನ್ನು ಆಳುತ್ತಿದ್ದನು. ಹಾಳಾದ ಕೆರೆಯನ್ನು ಪುನ: ಕಟ್ಟಿಸಲಾಯಿತು.

ಕ್ರಿ.ಶ.೮ನೇ ಶತಮಾನದಲ್ಲಿ ನೊಣಂಬ, ಪಲ್ಲವರು, ಉಚ್ಚಂಗಿದುರ್ಗವನ್ನು ಮುಖ್ಯ ಪಟ್ಟಣ ವಾಗಿರಿಸಿಕೊಂಡು ರಾಜ್ಯವನ್ನಾಳಿದರು. ಈ ನೊಣಂಬರ ಅರಸಿಯು ಈಗ್ರಾಮದ ಸ್ಥಾಪನೆಗೆ ಕಾರಣವಾಗಿರುವಳು ಆದರೆ ಅವಳ ಹೆಸರು ಶಾಸನದಲ್ಲಿ ತಿಳಿಸಿಲ್ಲ. (ವಕ್ತೃಗಳ ಹೇಳಿಕೆಯ ಪ್ರಕಾರ ರಾಣಿಯ ಹೆಸರು ಅಂಬಕ್ಕ)

ವಿಜಯನಗರ ಸಾಮ್ರಾಜ್ಯ ಹಾಳಾದ ಮೇಲೆ ಹರಪನಹಳ್ಳಿ ಸಾಮ್ರಾಜ್ಯವು ಸ್ವತಂತ್ರ ರಾಜ್ಯವಾಗಿ ಕಾಣಿಸಿಕೊಂಡಿತು. ಹರಪನಹಳ್ಳಿ ಪಾಳೆಗಾರನಾದ ಮೊದಲ ಸೋಮಶೇಖರನಾಯಕನಿಗೆ ಅರಸಿಕೇರಿಯಲ್ಲಿ ಬಂದುಗಳಿದ್ದರು. ಅರಸನ ಮಡದಿಯನ್ನು ಹಬ್ಬಕ್ಕೆ ಕರೆದುಕೊಂಡು ಬಂದಾಗ ಮಗ ಅಸ್ತಮ ರೋಗಕ್ಕೆ ತುತ್ತಾಗಿ ಅಲ್ಲಿಯೇ ಮೃತನಾದನು. ಆ ಸಮಾದಿ ಕೆರೆಯ ಹಿಂದೆ ಇಂದಿಗೂ ನಿದರ್ಶನವಾಗಿದೆ"[೧]

ಮಧ್ಯ ಕರ್ನಾಟಕದ ಭಾಗದಲ್ಲಿನ ದಾವಣಗೇರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನಿಂದ ೧೬ ಕಿ.ಮೀ. ದೂರವಿರುವ ಆಗ್ನೆಯ ಭಾಗಕ್ಕಿರುವ ಗ್ರಾಮವೇ ಅರಸಿಕೇರಿ. ಈ ಗ್ರಾಮದಲ್ಲಿ "ದಂಡಿನ ದುರುಗಮ್ಮ" ದೈವತ್ವದ ಪ್ರತಿನಿಧಿಯಾಗಿ ಈ ಪ್ರಾದೇಶಿಕ ಭಾಗದ ಅರಸಿ ಮನೆತನದ ಮನೆದೈವವಾಗಿ ಮತ್ತು ಜನಸಾಮಾನ್ಯರ ಮನೆ ಮನದ ದೈವವಾಗಿ ಕೆಳ ವರ್ಗದ "ಮರಿಯಜ್ಜ" ನಲ್ಲಿ ಪ್ರತಿರೂಪ ತಾಳಿದಳು.

## ೧.೧ ಭೌಗೋಳಿಕತೆ

ಒಂದು ಊರಿನ ಇತಿಹಾಸವನ್ನು ತಿಳಿಯಲು ಆ ಊರಿನ ಸುತ್ತ ಮುತ್ತಲಿನ ಪರಿಸರ ಬಹಳ ಮುಖ್ಯ ಅರಸಿಕೇರಿಯು ಪೂರ್ವ ಭಾಗಕ್ಕೆ ಹಿರೇ ಮತ್ತು ಚಿಕ್ಕ ಕೆರೆಗಳಿಂದ ಆವೃತಗೊಂಡಿದೆ. ಊರಿನಿಂದ ಉಳಿದ ಅರ್ಧ ಭಾಗ ಹೊಲಗದ್ದೆಗಳಿಂದ ಕೂಡಿದ್ದು ಕೆರೆಯು ೭೦೦ ಎಕರೆಗಳಿಂದ ಕೂಡಿದೆ. ಪಶ್ಚಿಮಕ್ಕೆ ನರಸಪ್ಪ ಗುಡ್ಡವಿದೆ. ಇದರ ಸುತ್ತ ಅರಣ್ಯವಿದೆ. ಉಳಿದ ಕೆಂಪು ಮತ್ತು ಮರುಳು ಮಿಶ್ರಿತ ಭೂಮಿಯಿಂದ ಆವೃತಗೊಂಡಿದೆ. ಈ ಅರಸಿಕೇರಿಯು ಹೋಬಳಿಯಾಗಿದ್ದು ಒಟ್ಟು ಭೌಗೋಳಿಕ ವಿಸ್ತೀರ್ಣ ೩೭೦೮೨ ಹೆಕ್ಟೇರ್ ಇದರಲ್ಲಿ ಕೃಷಿಗೆ ಯೋಗ್ಯವಾದ ಜಮೀನು ೨೮೯೧೪ ಹೆಕ್ಟೇರ್, ಕೃಷಿಗೆ ಯೋಗ್ಯವಲ್ಲದ ಜಮೀನು ೮೮೮೮ ಹೆಕ್ಟೇರ್, ಮುಂಗಾರು ಬೆಳೆಯ ವಿಸ್ತೀರ್ಣ ೨೨೭೪೮ ಹೆಕ್ಟೇರ್, ಹಿಂಗಾರು ಬೆಳೆಯ ವಿಸ್ತೀರ್ಣ ೨೦೨೦ ಹೆಕ್ಟೇರ್, ನೀರಾವರಿ ಬೆಳೆ ವಿಸ್ತೀರ್ಣ ೩೮೮೨ ಹೆಕ್ಟೇರ್ ಕೆರೆಯ ಮುಖಾಂತರ ೨೯೨ ಹೆಕ್ಟೇರ್ ಕೊಳವೆ ಬಾವಿಗಳ ಮುಖಾಂತರ ೧೧೦೪ ಹೆಕ್ಟೇರ್ ಭದ್ರಾ ಕಾಲುವೆ ೮೬೮ ಹೆಕ್ಟೇರ್ ಏತ ನೀರಾವರಿ ಇಲ್ಲ. ಒಟ್ಟು ಸರಕಾರಿ ಭೂಮಿ ೯೪೮೭ ಹೆಕ್ಟೇರ್, ಇಲ್ಲಿಯವರೆಗೂ ಅನಧಿಕೃತ ಸಾಗುವಳಿದಾರರಿಗೆ ಸಕ್ರಮಗೊಳಿಸಿ ಭೂ ವಿಸ್ತೀರ್ಣ ೨೭೭೭=೧೭ಎಕರೆ ಹೊಂದಿದೆ.

## ನರಸಪ್ಪ ಬೆಟ್ಟ

ಊರಿನ ಪಶ್ಚಿಮ ದಿಕ್ಕಿಗೆ ನರಸಿಂಹ ದೇವರ ಬೆಟ್ಟವಿದೆ. ಆ ಬೆಟ್ಟವು ಗುಹೆಯನ್ನು ಒಳಗೊಂಡಿದೆ. ಈ ಗುಹೆಯಿಂದ ಕೂಲಹಳ್ಳಿಯವರೆಗೆ ಹೋಗುತ್ತದೆ. ಹಿಂದೆ ನರಸಾಪುರ ಎನ್ನುವ ಊರಿತ್ತು. ಗುಡ್ಡದ ಪೂರ್ವ ಭಾಗದಲ್ಲಿ ಬಾವಿಯಲ್ಲಿ ಕಂಚಿನಗಾಲಿಗಳು ಮೇಲೆಳುತ್ತಿವೆ. ಎನ್ನುವ ನಂಬಿಕೆ ಜನಪದರಲ್ಲಿ ಬೇರೂರಿದೆ.

ಪಾಳೆಗಾರರ ಕಾಲದಲ್ಲಿ ನರಸಪ್ಪನ ಬೆಟ್ಟ ವೀಕ್ಷಣ ಕೇಂದ್ರವಾಗಿತ್ತು. ಈ ವೀಕ್ಷಣ ಕೇಂದ್ರದಲ್ಲಿ ಬೆಂಕಿಯನ್ನು ತೂರಿದರೆ ಶತೃಗಳ ಪಡೆ ದಾಳಿ ಮಾಡಲು ಬಂದಿವೆ ಎನ್ನುವ ಸೂಚನೆ. ಈ ಬೆಂಕಿಯನ್ನು ತೂರುವದು ಹರಪನಹಳ್ಳಿಯ ಪಾಳೆಗಾರರ ಮತ್ತು ಉಚ್ಚಂಗಿದುರ್ಗದ ಪಾಳೆಗಾರರ ಸೈನಕರಿಗೆ ತನ್ನ ಕಹಳೆಯ ಊದು ಸಂಕೇತವಾಗಿತ್ತು. ಈ ಕೇಂದ್ರದಲ್ಲಿನ ಕೆಲವು ಗುಡಿಗಳು ಭಗ್ನಗೊಂಡಿವೆ. ವಿಶಾಲವಾದ ಬಂಡೆ ಮೇಲ್ಗಡೆ ಉಗ್ರ ನರಸಿಂಹ ಯೋಗನರಸಿಂಹ ದೇವಸ್ಥಾನವಿದೆ. ಈ ದೇವಸ್ಥಾನದಲ್ಲಿ ಉಗ್ರ ನರಸಿಂಹಮೂರ್ತಿ ಅಪರೂಪವಾಗಿದ್ದು ಆ ಮೂರ್ತಿಗಳು ಇಂದು ಭಗ್ನಗೊಂಡಿದೆ.

**ಶಾಸನಗಳು**

ಈ ಬೆಟ್ಟದಲ್ಲಿ ಎರಡು ಶಾಸನಗಳು ದೊರಕುತ್ತವೆ. ಅದರಲ್ಲಿ ಒಂದು ಶಾಸನ ಬೆಟ್ಟದ ಮಧ್ಯ ಭಾಗದಲ್ಲಿದೆ. ಈ ಶಾಸನವು ಜೈನಮುನಿಗಳ ಸಲ್ಲೇಖನ ವ್ರತವನ್ನು ಕೈಗೊಂಡಿದ್ದರ ಬಗ್ಗೆ ವಿವರಣೆಯನ್ನು ನೀಡುತ್ತದೆ. ಮತ್ತೊಂದು ಶಾಸನವು ಬೆಟ್ಟದ ಮೇಲ್ಭಾಗದಲ್ಲಿದೆ. ಇದರಲ್ಲಿ ಹದಿನಾಲ್ಕನೇ ಶತಮಾನದಲ್ಲಿ ಒಬ್ಬ ರಾಜನಿಗೆ ದಾನ ಮಾಡಿರುವುದುದರ ಬಗ್ಗೆ ಉಲ್ಲೇಖವಿದೆ. ಆದರೆ ಯಾವ ರಾಜನೆಂದು ತಿಳಿದು ಬಂದಿಲ್ಲ.

**ಕೊಟ್ಟೂರು ಮರಡಿ**

ಊರಿನ ಆಗ್ನೆಯ ದಿಕ್ಕಿಗಿರುವ ಕೊಟ್ಟೂರು ಮರಡಿ ಎನ್ನುವುದು ಒಂದು ಚಿಕ್ಕ ಗುಡ್ಡವಿದೆ. ಈ ಮರಡಿಯು ಸಹ ತನ್ನದೇ ಆದಂತಹ ಮಹತ್ವ ಹೊಂದಿದೆ. ಐತಿಹಾಸಿಕವಾಗಿ ಹೇಳುವುದಾದರೆ ಪಂಚಗಣಾಧೀಶ್ವರರಲ್ಲಿ ಪ್ರಭಾವಿಯಾದ ಕೊಟ್ಟೂರಿನ ಕೊಟ್ಟೂರೇಶ್ವರರನ್ನು ನೆನೆದಿದ್ದರಿಂದ ಈ ಮರಡಿಗೆ ಕೊಟ್ಟೂರು ಮರಡಿ ಎಂದು ಕರೆಯುತ್ತಾರೆ. ಹಾಗೇನೆ ಬಳ್ಳಾರಿಯಿಂದ ಬರುವಾಗ ಮರಿಯಜ್ಜನಗೆ ಮರಡಿಯಲ್ಲಿ ಕಟ್ಟಿಗೆ ಮಾಡಿಕೊಳ್ಳುವ ಸಂದರ್ಭದಲ್ಲಿ ಈತನಿಗೆ ಬೆತ್ತದಲ್ಲಿ ಪಾರ್ವತಿಯು ಪ್ರತ್ಯಕ್ಷವಾಗಿದ್ದಳು. ಎಂಬ ಐತಿಹ್ಯವಿದೆ. ಈ ಅಂಶಗಳನ್ನು ಗಮನಿಸಿದಾಗ ಮರಡಿ ಹೆಸರು ಇಂದಿಗೂ ಉಳಿಯಲಿಕ್ಕೆ ಕಾರಣವಾಗಿದೆ. ಊರಿನ ಉತ್ತರ ದಿಕ್ಕಿಗೆ ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಕೋಲಶಾಂತೇಶ್ವರ ಐಕ್ಯಸ್ಥಳವಿದ್ದು ಅಲ್ಲಿ ಸಹ ಒಂದು ಐತಿಹಾಸಿಕ ಸ್ಥಳವನ್ನು ನೋಡಬಹುದು. ಈ ಭಾಗದಲ್ಲಿ ಕೋಲಾಶಾಂತೇಶ್ವರ ಮಹಾನ್ ಪವಾಡ ಪುರುಷರಾಗಿ ಮೆರೆದಿದ್ದಾರೆ. ಊರಿನ ಮಧ್ಯಭಾಗದಲ್ಲಿ ಚಾಲುಕ್ಯರ ಕಾಲದಲ್ಲಿ ಕಟ್ಟಿಸಿದ ಹರಿಹರೇಶ್ವರನ ದೇವಸ್ಥಾನವಿದೆ.

ದಕ್ಷಿಣದ ಕೊನೆಯ ಭಾಗಕ್ಕೆ ಪರಿಶಿಷ್ಟರ ದೇವತೆಯೆಂದರೆ "ದಂಡಿದುರುಗಮ್ಮ ಮಹಾ ಪವಾಡ ಪುರುಷಳಾಗಿ ಈ ಭಾಗದಲ್ಲಿ ಮೆರೆದಿದ್ದಾಳೆ. ಈ ಊರಿನ ಜನ ಕೃಷಿಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿದ್ದಾರೆ. ಇಲ್ಲಿ ಅತೀ ಹೆಚ್ಚಾಗಿ ಜೋಳ, ರಾಗಿ, ಹತ್ತಿ, ಹಾಗೂ ತೊಗರೆ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಕಾಲವಿಕಾಸವಾದಂತೆ ವೈಜ್ಞಾನಿಕವಾಗಿ ಕೃಷಿ ತಂತ್ರಜ್ಞಾನದ ಮೂಲಕ ಅನೇಕ ವಿದೇಶಿಯ ಕಂಪನಿಗಳು ಈ ಭಾಗದಲ್ಲಿ ಕೃಷಿಕರನ್ನೇ ಬಳಸಿಕೊಂಡು ಆಧುನಿಕ ತಂತ್ರ

ಜ್ಞಾನದ ಮಹತ್ವ ತಿಳಿಸಿ, ಅವರು ಆರ್ಥಿಕವಾಗಿ ಪ್ರಬಲವಾಗಿ ಬೆಳೆಯಲು ಈ ಬಿಜೋತ್ಪಾದನೆಯು ಕೃಷಿಕರಿಗೆ ನೆರವಾಗಿವೆ.

### ೧.೨. ಸಾಂಸ್ಕೃತಿಕತೆ

ಈ ಗ್ರಾಮವು ಸಾಂಸ್ಕೃತಿಕವಾಗಿ ಮಹತ್ವ ಹೊಂದಿದೆ. ಇಲ್ಲಿ ಅನೇಕ ದೇವರುಗಳ ಹಾಗೂ ದೇವತೆಗಳ ಗುಡಿಗೋಪುರಗಳನ್ನು ನೋಡಬಹುದಾಗಿದೆ. ಅಲ್ಲದೇ ಆ ದೇವರುಗಳು ಹಾಗೂ ದೇವತೆಗಳು ತಮ್ಮದೆ. ಅದೇ ರೀತಿಯಲ್ಲಿ ಭಕ್ತ ಸಮೂಹ ಹೊಂದಿರುವುದನ್ನು ಕಾಣಬಹುದಾಗಿದೆ. ಈ ಭಕ್ತರು ತಮ್ಮ ಇಷ್ಟ ದೇವ ದೇವತೆಯರಿಗೆ ನಾನಾ ರೀತಿಯ ಪೂಜಾಕಾರ್ಯಗಳನ್ನು ಹಬ್ಬ ಹರಿದಿನಗಳಲ್ಲಿ ವಿಶಿಷ್ಟವಾಗಿ ನೆರವೇರಿಸುವುದನ್ನು ನಾವು ಕಾಣಬಹುದಾಗಿದೆ.

ಪ್ರಮುಖವಾಗಿ ಈ ಗ್ರಾಮದ ದೇವರುಗಳೆಂದರೆ ಶ್ರೀ ಕೋಲುಶಾಂತೇಶ್ವರ ದೇವಸ್ಥಾನ ಹಾಗೂ ಶ್ರೀ ಹರಿಹರೇಶ್ವರ, ಶ್ರೀ ವೀರಭದ್ರೇಶ್ವರ, ಶ್ರೀ ಮೈಲಾರಲಿಂಗೇಶ್ವರ, ಶ್ರೀ ಚಿಕ್ಕಆಂಜನೇಯ, ಶ್ರೀ ಕಲ್ಲಿಂಗೇಶ್ವರ ಹಾಗೂ ಶ್ರೀ ಬೀರಪ್ಪ ಜೊತೆಗೆ ಮುಸ್ಲಿಂ ಜನಾಂಗದ ಮಸೀದಿಯನ್ನು ಕೂಡಾ ಕಾಣಬಹುದು. ಹಾಗೆಯೇ ದೇವತೆಯರ ಗುಡಿಗಳೆಂದರೆ ಶ್ರೀ ಉರಮ್ಮದೇವಿ, ಶ್ರೀ ಗಂಗಾಪರಮೇಶ್ವರಿ, ಶ್ರೀ ದಂಡಿ ದುರುಗಮ್ಮನ ದೇವಾಲಯಗಳು ಪ್ರಮುಖವಾಗಿವೆ. ಈ ಗ್ರಾಮದಲ್ಲಿನ ಪ್ರಮುಖ ಆಚರಣೆಗಳು ಈ ಕೆಳಗಿನಂತಿವೆ.

### ಊರಹಬ್ಬ

ಈ ದೇವತೆಯ ಹಬ್ಬಕ್ಕೆ ಊರಿನ ದೊಡ್ಡ ಹಬ್ಬ ಎಂದು ಕರೆಯುತ್ತಾರೆ. ಈ ಹಬ್ಬಕ್ಕೆ ಮೊದಲು ಐದು ವರ್ಷಕ್ಕೊಮ್ಮೆ ನಡೆಸಿಕೊಂಡು ಬರುತ್ತಿದ್ದರು. ಆದರೆ ಪ್ರಸ್ತುತ ದಿನಗಳಲ್ಲಿ ಒಂಭತ್ತು ವರ್ಷಗಳಿಗೊಮ್ಮೆ ಈ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ಈ ಹಬ್ಬದಲ್ಲಿ "ಘಟಿಪೂಜಾ ವಿಧಾನ" ಬಹಳಷ್ಟು ವೈಶಿಷ್ಟಪೂರ್ಣವಾಗಿದೆ. ಈ ಪೂಜಾವಿಧಾನದಲ್ಲಿ ಗ್ರಾಮದ ಆಯಗಾರರ ಮನೆಯಿಂದ ಕೇಲುಗಳು ಬರುತ್ತವೆ. ಆಯಗಾರರೆಂದರೆ ಊರಿನಗೌಡರು, ಬಣಕಾರರು, ತಳವಾರರು, ಹರಿಜನರು, ಬಾರಿಕರು, ಚಲವಾದಿಯರು ಇವರುಗಳು ತಮ್ಮ ತಮ್ಮ ಮನೆಯಲ್ಲಿ ಘಟಗಳನ್ನು ಪ್ರತ್ಯೇಕವಾಗಿ ಒಬ್ಬೊಬ್ಬರ ಮನೆಯಿಂದ ವಾದ್ಯ, ನೃತ್ಯ ಮೇಳಗಳೊಂದಿಗೆ ಊರಿನ ಎಲ್ಲಾ ಜನರು ಕೂಡಿದ ದೇವತೆಯ ಸನ್ನಿಧಿಗೆ ಬರುತ್ತಾರೆ.

ಎಲ್ಲಾ ಆಯಗಾರರು ಘಟಿ ತಂದ ನಂತರ ಬಣಕಾರ ಮನೆಯಿಂದ ತಂದ ಘಟಿ ಅಂದರೆ 'ಮಳಿಪಚಲಿ' ಯನ್ನು ವಾದ್ಯ ಹಾಗೂ ನೃತ್ಯ ಮೇಳಗಳೊಂದಿಗೆ ಊರಿನ ಎಲ್ಲಾ ಜನರು ಸೇರಿಕೊಂಡು ಹೊಳೆಗೆ ಹೋಗಿ ಘಟಗಳಿಗೆ ಪೂಜಾ ಕಾರ್ಯಗಳನ್ನು ನೆರವೇರಿಸಿ, ಹೊಳೆಯಿಂದ ವಾದಕರು "ಚೌತಿಕಟ್ಟೆಗೆ ತರುತ್ತಾರೆ. ಚೌತಿ ಕಟ್ಟೆಯ ಹತ್ತಿರ ಅವುಗಳನ್ನು ಇಟ್ಟು ಪೂಜಾ ಕಾರ್ಯಗಳನ್ನು ನೆರವೇರಿಸಿ, ತಮ್ಮ ತಮ್ಮ ಘಟಗಳನ್ನು ವಾದ್ಯ ಮತ್ತು ನೃತ್ಯಗಳೊಂದಿಗೆ ಮನೆಗಳಿಗೆ ಮರಳಿ ಒಯ್ಯುತ್ತಾರೆ.

ಮಾರನೇ ದಿನ ಬೆಳಿಗ್ಗೆ "ಘಟಿಗಳನ್ನು" ಆಯಗಾರರು ತಮ್ಮ ಮನೆಗಳಿಂದ ಘಟಿಗಳನ್ನು ಚೌತಿಕಟ್ಟೆಗೆ ವಾದ್ಯ ಮತ್ತು ನೃತ್ಯ ಮೇಳಗಳೊಂದಿಗೆ ತರುವುದರ ಮೂಲಕ ಊರದೇವತೆಯಾದ ಊರಮ್ಮನಿಗೆ ಬಲಿಕೊಡಲು ಕೋಣವನ್ನು ತಂದು ಬಲಿಕೊಡುತ್ತಾರೆ. ನಂತರ ಇಪ್ಪತ್ತೊಂದು ಚೀಲ ಜೋಳದ ನುಚ್ಚನ್ನು ಸಂಕಟಿ ಮಾಡಿ ಚೌತಿ ಕಟ್ಟೆಯಿಂದ ಗ್ರಾಮದ ಎಲ್ಲಾ ದಿಕ್ಕುಗಳಿಗೂ ಚರಗ ಚಲ್ಲುತ್ತಾರೆ. ಅಲ್ಲದೇ ಊರ ಸುತ್ತಲೂ ಯಾರು ಹೊರಗೆ ಹೋಗದಂತೆ ಹಾಗೂ ನೆರೆಹೊರೆಯವರು ಬರದಂತೆ ಬೇಲಿಯನ್ನು ಹಾಕುತ್ತಾರೆ. ಚರಗ ಚೆಲ್ಲಿದ ನಂತರ ಚೌತಿ ಕಟ್ಟೆ ಅಥವಾ ಚೌತಿಮನೆಯ ಮುಂದೆ ಹೂವಿನಹಡಗಲಿಯಿಂದ ಬಂದ ರಾಣಿಗರು ಹಾಸ್ಯ ಸನ್ನಿವೇಶವನ್ನು ಈ ಹಬ್ಬಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಪಡಿಸುತ್ತಾರೆ. ನಂತರ ಘಟಿಗಳನ್ನು ಹೊತ್ತ ಆಯಗಾರರಿಗೆ ಹೊಸ ಬಟ್ಟೆಗಳನ್ನು ಕೊಡುತ್ತಾರೆ.

ನಂತರ ಪೋತರಾಜರು (ವಾಲ್ಮೀಕಿ ಜನಾಂಗದವರು) ಕನಕನ ಬಸಾಪುರದಿಂದ ಬರುತ್ತಾರೆ. ಅವರು ಬಂದ ನಂತರ ಸದರಿ ಗ್ರಾಮದ ಕುರುಬ ಜನಾಂಗದವರು. ಒಂದು ಓತಮರಿ (ಗಂಡು ಮೇಕೆ) ಯನ್ನು ಬಚ್ಚಿಟ್ಟಿರುತ್ತಾರೆ. ಆಗ ಪೋತುರಾಜರ ಕಾಲಿಗೆ ಗಗ್ಗರಿ ಕಟ್ಟಿಕೊಂಡು ವೇಷದಾರಿಯಾಗಿ ಆ ಊರಿನ ಚಲುವಾದಿ ಒಬ್ಬ ಹುಡುಗನಿಗೆ ಛಾಟಿಯಿಂದ ಹೊಡೆಯುತ್ತ ಓತು ಮರಿಯನ್ನು ಹುಡುಕುವಂತೆ ತಿಳಿಸುತ್ತಾನೆ. ಮರಿಯನ್ನು ಹುಡುಕಿದ ನಂತರ ಅದನ್ನು ಚೌತಿಕಟ್ಟೆಯ ಮುಂದೆ ಪೋತುರಾಜರು ತನ್ನ ಹಲ್ಲಿನಿಂದ ಜಗಿದು ದೇವಿಗೆ ಅರ್ಪಣೆ ಮಾಡುತ್ತಾನೆ. ಈ ರೀತಿಯಾಗಿ ಊರಮ್ಮ ದೇವಿಯ ಪೂಜಾರ್ಪಣೆ ಮಾಡುತ್ತಾನೆ. ಈರೀತಿಯಾಗಿ ಊರಮ್ಮ ದೇವಿಯಪೂಜಾ ಕಾರ್ಯಗಳು ಈ ಊರಲ್ಲಿ ಪ್ರತಿ ಒಂಭತ್ತು ವರ್ಷಕ್ಕೊಮ್ಮೆ ತಪ್ಪದೇ ಜರುಗುತ್ತದೆ.

**ಕೋಲುಶಾಂತೇಶ್ವರ ಜಾತ್ರಾ ಮಹೋತ್ಸವ**

ಅರಸಿಕೇರಿಯಲ್ಲಿನ ಪ್ರಮುಖ ಆಚರಣೆಗಳಲ್ಲಿ ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಶ್ರೀಕೋಲು ಶಾಂತೇಶ್ವರ ಅವರ ಜಾತ್ರಾ ಮಹೋತ್ಸವವು ಒಂದಾಗಿದೆ. ಇಲ್ಲಿ ಸಕಲ ಸದ್ಭಕ್ತರು ಎಲ್ಲಾ ಜಾತಿ ಜನಾಂಗದ ಜನರು ಶ್ರೀ ದೇವರ ಜಾತ್ರೆಯಲ್ಲಿ ಭಾಗವಹಿಸುವುದು ಒಂದು ವೈಶಿಷ್ಟಪೂರ್ಣವಾಗಿದೆ. ಈ ದೇವರ ರಥೋತ್ಸವವು ಹಂಪಿ ಹುಣ್ಣಿಮೆ ಅಥವಾ ದವನದ ಹುಣ್ಣಿಮೆಯ ದಿನದಂದು ಜರುಗುತ್ತದೆ. ರಥೋತ್ಸವದ ಮುನ್ನಾ ದಿನಗಳಲ್ಲಿ ದೇವರಿಗೆ ನಾನಾ ರೀತಿಯ ಪೂಜಾ ವಿಧಿವಿಧಾನಗಳನ್ನು ಆಚರಿಸುತ್ತಾರೆ. ಮೊದಲು ನಾಲ್ಕು ದಿನ ಶ್ರೀ ದೇವರ ಉತ್ಸವ ಮೂರ್ತಿಯನ್ನು ಹುಚ್ಚಯದಲ್ಲಿ ಅಂದರೆ ಉತ್ಸವ ಮೂರ್ತಿಯನ್ನು ಹೊತ್ತೊಯ್ಯುವ ಚಕ್ಕಡಿಯಲ್ಲಿ ವಿಜೃಂಭಣೆಯಿಂದ ಊರೆಲ್ಲಾ ಮೆರವಣಿಗೆ ಮಾಡುತ್ತಾರೆ. ಐದನೇ ದಿನದಂದು ರಥೋತ್ಸವವು ಜರುಗುತ್ತದೆ. ಈ ರಥೋತ್ಸವಕ್ಕೆ ಸುತ್ತಮುತ್ತಲಿನ ಗ್ರಾಮದ ಭಕ್ತ ಸಮೂಹ ಬಾರಿ ಪ್ರಮಾಣದಲ್ಲಿ ಸೇರುತ್ತಾರೆ.

ರಥೋತ್ಸವವಾದ ಮೂರನೇ ದಿನದಿಂದ ಎರಡು ದಿನಗಳ ಶ್ರೀ ಕೋಲುಶಾಂತೇಶ್ವರ ಮಠದ ಸ್ವಾಮಿಗಳ ನಿರ್ದೇಶನದಂತೆ ಕುಸ್ತಿ ಪಂದ್ಯಾವಳಿಗಳು ನಡೆಯುತ್ತವೆ. ಇದಕ್ಕೂ ಮುನ್ನ ಕಾರ್ತಿಕ

ಮಾಸದಲ್ಲಿ ಶ್ರೀ ಕೋಲುಶಾಂತೇಶ್ವರನ ಕಾರ್ತಿಕ ಮಹೋತ್ಸವ ಜರುಗುತ್ತದೆ. ವಿಜಯದಶಮಿ ದಸರಾಹಬ್ಬದಂದು ಶ್ರೀ ದೇವರು ಬನ್ನಿ ಮುಡಿಯಲು ಊರ ಹೊರಗಿನ ಬನ್ನಿಕಟ್ಟೆಗೆ ಹೋಗಿ, ಬನ್ನಿ ಮುಡಿದು ಸಂತೋಷಭರಿತರಾಗುತ್ತಾರೆ.

### ಮೈಲಾರಲಿಂಗನ ಕಾರ್ತಿಕೋತ್ಸವ

ಈ ಭಾಗದಲ್ಲಿನ ಪ್ರಮುಖ ಹಬ್ಬಗಳಲ್ಲಿ ಮೈಲಾರಲಿಂಗನ ಕಾರ್ತಿಕೋತ್ಸವವು ಭರತ ಹುಣ್ಣಿಮೆಯಲ್ಲಿ ನಡೆಯುತ್ತದೆ. ಹುಣ್ಣಿಮೆಯಾದ ಎರಡು ದಿನಗಳ ನಂತರ ಕಾರ್ಣಿಕ ಜರುಗುತ್ತದೆ. ನಾಲ್ಕನೇ ದಿವಸದಲ್ಲಿ ಗ್ವಾರಪ್ಪರಿಂದ ಸರಪಳಿ ಹರಿಯುವ ಕಾರ್ಯ ನಡೆಯುತ್ತದೆ. ಅರಸಿಕೇರಿ, ಬಸಾಪುರ ಹಾಗೂ ಅಡವಿಮಲ್ಲಾಪುರ ಈ ಮೂರು ಊರುಗಳ ನಡುವೆ ಇರುವ ಮೈಲಾರಲಿಂಗೇಶ್ವರ ದೇವಸ್ಥಾನವಿದ್ದು, ಸುತ್ತಮುತ್ತಲಿನ ಅನೇಕ ಭಕ್ತರು ಈ ಕಾರ್ಣಿಕೋತ್ಸವ ಹಾಗೂ ಸರಪಳಿ ಹರಿಯುವ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳುತ್ತಾರೆ. ಹೀಗೆ ಅರಸಿಕೇರಿ ಗ್ರಾಮದ ಸಾಂಸ್ಕೃತಿಕ ವಾತಾವರಣವು ತುಂಬಾ ಅದಮ್ಯವಾಗಿದ್ದು, ಜನಪದರಲ್ಲಿ ಬೇರೂರಿರುವುದನ್ನು ನಾವು ಕಾಣಬಹುದಾಗಿದೆ.

### ೧.೩. ಸಾಮಾಜಿಕತೆ

ಈ ಗ್ರಾಮದಲ್ಲಿ ಎಲ್ಲಾ ವರ್ಗದ ಜನರು ನೆಲೆಸಿದ್ದು, ಪುರುಷ ಪ್ರಧಾನವಾದ ಕುಟುಂಬ ವ್ಯವಸ್ಥೆಯನ್ನು ಹೊಂದಿರುತ್ತಾರೆ. ಜೀವನಾಧಾರಕ್ಕೆ ಮುಖ್ಯವಾಗಿ ಕೃಷಿಯನ್ನು ಅವಲಂಭಿಸಿದ್ದು, ಕೆಲವರು ಉಪಕಸಬುಗಳನ್ನು ಅವಲಂಬಿಸಿರುತ್ತಾರೆ. ಕೆಲವರು ಸರಕಾರಿ ನೌಕರಿಯಲ್ಲಿದ್ದು, ಹೀಗೆ ಜೀವನ ಸಾಗಿಸುತ್ತಿದ್ದಾರೆ. ಪ್ರಧಾನ ಕಸಬಿನ ಜೊತೆಗೆ ಉಪಕಸಬುಗಳಾದ ಬಡಿಗೆತನ, ಕುಂಬಾರಿಕೆ, ಕಮ್ಮಾರ, ಚಮ್ಮಾರ, ನೇಕಾರ, ವ್ಯಾಪಾರಸ್ಥರು, ಅಕ್ಕಸಾಲಿಗರು ಹೀಗೆ ಅನೇಕ ಉಪಕಸಬುಗಳನ್ನು ಅವಲಂಬಿಸಿ ಜೀವನ ಸಾಗಿಸುತ್ತಾರೆ.

ಎಲ್ಲಾ ವರ್ಗದ ಜನರಲ್ಲಿ ಪುರುಷನೇ ಪ್ರಧಾನವಾಗಿದ್ದರೂ ಸ್ತ್ರೀಯು ಕೂಡಾ ಪುರುಷನಿಂದ ಗೌರವಿಸಲ್ಪಡುತ್ತಾಳೆ. ಹಾಗೂ ಆಕೆಯು ಕೂಡಾ ಪುರುಷನಂತೆ ಎಲ್ಲಾ ಕಾರ್ಯಗಳಲ್ಲಿ ಭಾಗಿಯಾಗಿ ಜೀವನವನ್ನು ನಡೆಸುತ್ತಿದ್ದಾಳೆ

ಇಲ್ಲಿ ಬೇರೆ ಬೇರೆ ಜಾತಿಯ ಅಂದರೆ ಜಂಗಮ, ಲಿಂಗಾಯತ, ಬ್ರಾಹ್ಮಣ, ಶೆಟ್ಟರು, ಕುರುಬರು, ಈಡಿಗರು, ನಾಯಕರು, ಬಾರಿಕರು, ಗೊಂದಲಿಗರು, ಹರಿಜನರು, ಕಮ್ಮಾರರು, ಕುಂಬಾರರು, ಬಡಿಗರು ಇನ್ನೂ ಮುಂತಾದ ಜಾತಿಗಳ ಜೊತೆಗೆ ಪಿಂಜಾರರು ಹಾಗೂ ಮುಸ್ಲಿಂ, ಜನಾಂಗದವರು ಈ ಊರಲ್ಲಿ ವಾಸವಾಗಿದ್ದಾರೆ. ಹೀಗೆ ಎಲ್ಲರೂ ಕೂಡಾ ವ್ಯವಸಾಯವನ್ನೇ ಮುಖ್ಯವಾಗಿಟ್ಟುಕೊಂಡು ಕೆಲವರು ಉಪಕಸಬುಗಳಲ್ಲಿ ತೊಡಗಿದ್ದಾರೆ. ಈ ರೀತಿಯಾಗಿ ಎಲ್ಲರೂ ಸಾಮರಸ್ಯದ ಕೌಟುಂಬಿಕ ಜೀವನ ನಡೆಸುತ್ತಾ ಬಂದಿದ್ದಾರೆ. ಹೀಗೆ ಎಲ್ಲಾ ಜನರು ಹಬ್ಬ ಹರಿದಿನಗಳಲ್ಲಿ ಸಾಮೂಹಿಕವಾಗಿ

ದೇವಾನುದೇವತೆಗಳ ಆರಾಧನೆ ಮಾಡಿ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಂಡು ಜೀವನಸಾಗಿಸುವುದನ್ನು ನೋಡಬಹುದಾಗಿದೆ. ಈ ಗ್ರಾಮದಲ್ಲಿ ದುರ್ಗಾದೇವಿಯನ್ನು ಕೆಳವರ್ಗದವರು ಪೂಜೆಗೈಯ್ಯುತ್ತಿದ್ದರು. ಅವರನ್ನು ಎಲ್ಲಾ ವರ್ಗದ ಜನರು ಪೂಜ್ಯ ಭಾವನೆಯಿಂದ ಗೌರವಿಸುತ್ತಾರೆ. ಎಲ್ಲರೂ ಸಾಮೂಹಿಕವಾಗಿ ಜಾತ್ರೆ ಹಬ್ಬಗಳಲ್ಲಿ ಪಾಲ್ಗೊಂಡು ಸಮಾಜದ ಸಾಮರಸ್ಯವನ್ನು ಮೆರೆದಿದ್ದಾರೆ.

ಸತ್ಯಕ್ಕೆ ಹೆಸರಾದ ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಶ್ರೀಕೋಲಶಾಂತೇಶ್ವರ ರಥೋತ್ಸವದಲ್ಲಿ ಕೆಳ ವರ್ಗದ ಜನರು ಪಾಲ್ಗೊಂಡು ಕಾರ್ಯ ನೆರವೇರಿಸುತ್ತಾರೆ. ಇದು ಸಾಮಾಜಿಕ ಭಾವೈಕ್ಯತೆಗೆ ಹಿಡಿದ ಕೈಗನ್ನಡಿಯಾಗಿದೆ. ಮುಸ್ಲಿಂ ಪವಿತ್ರ ಹಬ್ಬವಾದ ಮೋಹರಂನಲ್ಲಿಯೂ ಸಹ ಹಿಂದೂಗಳು ಪಾಲ್ಗೋಳ್ಳುತ್ತಾರೆ. ಅಲೇ ದೇವರು ಹಬ್ಬದಲ್ಲಿ, ಅಜ್ಜಯ್ಯನ ಮಠದಲ್ಲಿ ಅಲೆದೇವರನ್ನು ಕೂಡಿಸಿ ರಿವಾಯಿತ್‌ಪದಗಳು, ಸವಾಲ್‌ಪದಗಳು, ಲಾವಣಿಪದಗಳನ್ನು ಹಾಡುತ್ತಾರೆ. ಈ ಆಚರಣೆಗಳನ್ನು ನೋಡಿದರೆ ಹಿಂದೂ ಮುಸ್ಲಿಂ ಜೊತೆಗೂಡಿ ಸಮಾಜದ ಐಕ್ಯತೆಗೆ ಕೈಗನ್ನಡಿಯಾಗಿದೆ. ಹಬ್ಬ ಹರಿದಿನಗಳಲ್ಲಿ ತಮ್ಮ ಕುಲಕಸಬನ್ನು ಮುಂದುವರೆಸುತ್ತಾ ಬಂದಿದ್ದಾರೆ. ಮಡಿವಾಳರು, ಚಲವಾದಿ, ಹರಿಜನ, ತಳವಾರ, ಬಾರಿಕರು, ಜಂಗಮರು ಈ ಎಲ್ಲಾ ವರ್ಗದ ಜನರು ಇಂದು ವೈಜ್ಞಾನಿಕ ಯುಗದಲ್ಲಿಯೂ ಕೂಡಾ ತಮ್ಮ ಕುಲಕಸಬುಗಳನ್ನು ಇನ್ನೂ ಮುಂದುವರೆಸಿಕೊಂಡು ಬಂದಿದ್ದಾರೆ. ಸಮಾಜದಲ್ಲಿನ ಸಾಮರಸ್ಯವೇ ಈ ಕುಲಕಸಬುಗಳು ಉಳಿಯಲು ಸಹಕಾರಿಯಾಗಿವೆ. ಈ ವರ್ಗದ ಜನರಿಗೆ ಧಾನ್ಯಗಳ ರೂಪದಲ್ಲಿ ಕೊಡುವ ಪದ್ಧತಿ ಇನ್ನೂ ಮುಂದುವರೆದಿದ್ದು, ಈ ಸಮಾಜದಲ್ಲಿ ಜಾತಿ ಪ್ರತಿಷ್ಠೆಯ ಪ್ರಶ್ನೆಯಾಗಿದ್ದರೂ ದೇವಿಯ ಜಾತ್ರೆಯಲ್ಲಿ ಅರ್ಚಕರು ಮಾಡಿದ ಪ್ರಸಾದವನ್ನು ಮೇಲ್ವರ್ಗದವರು ಜಾತಿ ಭೇದವೆನ್ನದೇ ಸಾಮೂಹಿಕವಾಗಿ ಕುಳಿತುಕೊಂಡು ಪ್ರಸಾದವನ್ನು ಸ್ವೀಕರಿಸುತ್ತಾರೆ. ಇದು ಸಹಬಾಳ್ವೆಯನ್ನು ಪ್ರತಿನಿಧಿಸುತ್ತದೆ.

ಸಾಮಾಜಿಕವಾಗಿ ಹೇಳುವುದಾದರೆ ಕೂಲಿಕಾರರು, ಕೃಷಿಕರು, ವ್ಯಾಪಾರಸ್ಥರು, ಇವರುಗಳ ಮದ್ಯ ಯಾವುದೇ ಭಿನ್ನಾಭಿಪ್ರಾಯಗಳಿಲ್ಲ. ಯಾವುದೇ ಸಮಾಜದ ವ್ಯಕ್ತಿಗಳು ಕೂಡಾ ಅಂತಸ್ತು, ಪ್ರತಿಷ್ಠೆಯಾಗಿರುವ ಮಾನವೀಯತೆಯ ಮೌಲ್ಯಗಳೊಂದಿಗೆ ಬದುಕು ಸಾಗಿಸುತ್ತಿದ್ದಾರೆ. ವಿದೇಶಿಯ ಬಿಜೋತ್ಪಾದನೆಯ ಕಂಪನಿಗಳ ಹಾವಳಿಯಿಂದ ಅಪ್ರಾಪ್ತ ಮಕ್ಕಳಿಂದ ದುಡಿಸಿಕೊಳ್ಳುವ ಪದ್ಧತಿ ಸಾಮಾಜಿಕವಾಗಿ ಕಂಠಕಪ್ರಾಯವಾಗಿದೆ. ಖಾಸಗೀಕರಣ, ಉದಾರೀಕರಣ, ಮತ್ತು ಕೈಗಾರಿಕೀಕರಣ ಪ್ರಭಾವದಿಂದ ಇಲ್ಲಿಯ ಕೃಷಿಕರು ವಿದೇಶಿಯ ಕಂಪನಿಗಳ ಪ್ರಭಾವದಿಂದ ಆರ್ಥಿಕವಾಗಿ ಪ್ರಬಲವಾಗಿ ಬೆಳೆಯಲು ಸಕಾರಿಯಾಗಿವೆ. ಹೀಗೆ ಆಧುನಕ ವಸ್ತುಗಳನ್ನು ಪಡೆದುಕೊಳ್ಳಲು ಇವರಿಗೆ ಬಹಳ ಸಹಕಾರಿಯಾಗಿದೆ. ಇಲ್ಲಿ ಶ್ರೀಮಂತ ವರ್ಗದವರು ಕೆಳ ವರ್ಗದ ಜನರ ಮೇಲೆ ಯಾವುದೇ ರೀತಿ ದೌರ್ಜನ್ಯಗಳು ನಡೆದಿಲ್ಲ. ಇಲ್ಲಿ ಸ್ತ್ರೀ ಪುರುಷರ ಸಂಖ್ಯೆ ಸಮನಾಗಿದೆ. ಹಾಗೆಯೇ ಸ್ತ್ರೀಯರಿಗೂ ಗೌರವ ಸ್ಥಾನಗಳು ದೊರೆತಿವೆ. ನಂತರ ಸ್ತ್ರೀಯರಿಗೂ ಕೂಡ ಹೊಲ ಕೆಲಸ ಮಾಡುವುದರಲ್ಲಿಯೂ ನಾವು ಕೂಡಾ ಪುರುಷರಿಗಿಂತ ಕಡಿಮೆಯಿಲ್ಲೆನ್ನುವುದನ್ನು ತೋರಿಸಿಕೊಟ್ಟಿದ್ದಾರೆ.

## ೧.೪ ಧಾರ್ಮಿಕತೆ

ನಾಡಿನ ಪ್ರಖ್ಯಾತಿಯನ್ನು ಪಡೆದು ದೈವತ್ವದ ಮಹಿಮೆಯನ್ನು ನಾಡಿನಾದ್ಯಂತ ಪಸರಿಸಿದ ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಕೋಲಶಾಂತೇಶ್ವರ ಮಹಾಪುರುಷರು ಅರಸಿಕೇರಿಯಲ್ಲಿ ನೆಲೆಸಿ ಈ ನೆಲವನ್ನು ಪಾವನಗೊಳಿಸಿ, ತಮ್ಮ ಪವಾಡಗಳಿಂದ ಪವಾಡ ಪುರುಷರಾಗಿ ಮೆರೆದಿದ್ದಾರೆ.

ಇವರ ಕಾಲಮಾನ ೧೪ನೇಯ ಶತಮಾನ ಇವರ ಪರಂಪರೆಯ ಬಗ್ಗೆ ದಾಖಲೆಗಳಿಲ್ಲದ್ದು, ವಿಷದನೀಯ, ಸಮಾಜದಲ್ಲಿ ಮೇಲ್ವರ್ಗದ ಪ್ರಜ್ಞಾವಂತರಾದ ಜನರು ಅಥವಾ ಪಟ್ಟಾಭೀಶಕ್ತರಾದ ಸ್ವಾಮಿಗಳೊ ಗುರು ಪರಂಪರೆಯ ಬಗ್ಗೆ ಅಥವಾ ಮಠದ ಇತಿಹಾಸದ ದಾಖಲೆಗಳ ಬಗ್ಗೆ ಕಾಳಜಿ ವಹಿಸದಿರುವುದು ದುರಂತ. ೧೯೨೦ ರ ಹಿಂದೆ ನಂದಿಹಳ್ಳಿ ಮಠದ ಮೃತುಂಜಯಸ್ವಾಮಿಗಳು ೧೯೨೦ ರಲ್ಲಿ ಕ್ಯಾರಿಕಟ್ಟಿ ಗ್ರಾಮದ ಚನ್ನವೀರಪ್ಪ ಸ್ವಾಮಿಗಳು ಪಟ್ಟಾಧ್ಯಕ್ಷರಾಗಿದ್ದರು. ಶ್ರೀಸನ್ನಿದಿಯವರು ಲಿಂಗೈಕ್ಯರಾದ ಮೇಲೆ ಅರಸಿಕೇರಿ ಮಠವು ಹತ್ತು ವರ್ಷಗಳವರೆಗೆ ಅನಾಥವಾಗಿತ್ತು. ನಂತರದ ದಿನಗಳಲ್ಲಿ ಅರಸಿಕೇರಿ ಗ್ರಾಮದ ಸಮಸ್ತ ಭಕ್ತರು ಗದುಗಿನ ಶ್ರೀತೋಂಟದ ಸಿದ್ದಲಿಂಗೇಶ್ವರ ಸ್ವಾಮಿಗಳ ಸಮ್ಮುಖದಲ್ಲಿ ಹಿರೇಕೆರೂರ ತಾಲೂಕಿನ ದೂದಿಹಳ್ಳಿ ಮಠದ ವೀರಭದ್ರಯ್ಯ ಮತ್ತು ಬಸಮ್ಮ ಎಂಬ ದಂಪತಿಗಳ ಮೂರನೇ ಮಗನಾಗಿ ಜನಿಸಿದರು. ಶ್ರೀಶಾಂತಲಿಂಗ ದೇಶಿ ಕೇಂದ್ರ ಡಿಸೆಂಬರ್ ೪ ೧೯೮೪ ರಲ್ಲಿ ಚರಪಟ್ಟಾಧ್ಯಕ್ಷರಾದರು. ಈ ಮಠದ ಸಂಸ್ಥಾಪಕರಾದ ಶಾಂತಲಿಂಗೇಶ್ವರ ಮಹಾ ಸನ್ನಿದಿಯವರು ಸಮಾಜದಲ್ಲಿನ ಕಂದಾಚಾರಗಳನ್ನು ನಿರ್ಮೂಲನೆ ಮಾಡುವುದು, ಅಜ್ಞಾನದಲ್ಲಿರುವ ಜನರನ್ನು ಸುಜ್ಞಾನದಡೆಗೆ ಕರೆದೋಯುವುದು, ಅವರ ಬದುಕಿನಲ್ಲಿ ಸಮಾಜದ ಜ್ಞಾನವನ್ನು ಬೆಳೆಸುವುದು ಇವರ ಮೂಲ ಮಂತ್ರವಾಗಿತ್ತು. ಹಾಗೂ ಸಮಾಜದ ಐಕ್ಯತೆ, ಸಾಮರಸ್ಯ, ಸಹಬಾಳ್ವೆಯಿಂದ ನಡೆಯುವಂತೆ ಕರೆಕೊಟ್ಟರು. ಸಮಾಜದ ಎಲ್ಲಾ ವರ್ಗದ ಏಳಿಗೆಗಾಗಿ ದುಡಿಯುವುದು ಇವರ ದ್ಯೇಯೋದ್ಧೇಶವಾಗಿತ್ತು. ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ಶ್ರೀ ಕೋಲಶಾಂತೇಶ್ವರ ರಥೋತ್ಸವ ಜರುಗುತ್ತದೆ. ಈ ರಥೋತ್ಸವದ ಕಾರ್ಯದಲ್ಲಿ ಊರಿನ ಎಲ್ಲಾ ವರ್ಗದ ಜನರು ಭಾಗವಹಿಸಿ ಅದ್ದೂರಿಯಾಗಿ ನೆರವೇರಿಸುತ್ತಾರೆ. ಈ ಜಾತ್ರೆಯಲ್ಲಿ ನಾಡಿನ ಎಲ್ಲಾ ಮೂಲೆಗಳಿಂದ ಸಾಗರೋಪಾದಿಯಲ್ಲಿ ಭಕ್ತರ ಸಮೂಹ ಹರಿದು ಬರುತ್ತದೆ.

ದೇವಿಯ ಜಾತ್ರೆಯ ಮುಖ್ಯ ವಿಷಯವೆಂದರೆ ಜಾತ್ರೆಯ ಮೂರನೇಯ ದಿನವಾದ ಭಾನುವಾರ ಸೂರ್ಯೋದಯವಾಗುವುದಕ್ಕಿಂತ ಮುನ್ನ ಹೊಳೆಗೆ ಪೂಜೆಗೆ ಹೋಗುವುದು ವಿಶೇಷ. ಈ ಸಂದರ್ಭದಲ್ಲಿ ಭಕ್ತಾದಿಗಳು ತಂಡೋಪ ತಂಡವಾಗಿ ಬಂದು ದೇವತೆಯನ್ನು ಹೊತ್ತ ಅರ್ಚಕನ ಪಾದ ಸ್ಪರ್ಶಿಸಲು ಅಡ್ಡಲಾಗಿ ಮಲಗುತ್ತಾರೆ. ಈ ಅರ್ಚಕರು ಅವರ ಬೆನ್ನುಗಳ ಮೇಲೆ ನಡೆದು ಹೋಗಿ ಹೊಳೆ ಸೇರುವುದು. ಹೊಳೆಯಲ್ಲಿ ಪೂಜೆ ಪುನಸ್ಕಾರಗಳು ಮುಗಿದ ನಂತರ ದೇವಿಯು ಮತ್ತೇ ಹೊಳೆಯಿಂದ ದೇವಾಲಯಕ್ಕೆ ಪ್ರವೇಶಿಸಲು ಬರುವಾಗ ದೇವಿಗೆ ಭಕ್ತಾದಿಗಳು ಸಾವಿರಾರು ಕುರಿಗಳನ್ನು ಬಲಿಕೊಟ್ಟು, ತದನಂತರ ಅಲ್ಲಿಂದ ದೇವಾಲಯದವರೆಗೂ ಜನ ಸಮೂಹದೊಂದಿಗೆ ಭಕ್ತಾದಿಗಳ ಬೆನ್ನ ಮೇಲೆ

ನಡೆಯುತ್ತ ದೇವಾಲಯದ ದ್ವಾರ ಬಂದಾಗ ಅರ್ಚಕ ವಂಶದವರೆಲ್ಲಾ ದೇವತೆಗೆ ಆರತಿ ಮತ್ತು ಓಕಳಿ ಎತ್ತುತ್ತಾರೆ. ನಂತರ ಭಕ್ತಾದಿಗಳು ಉದೋ, ಉದೋ ಎಂಬ ಉದ್ಗಾರದೊಂದಿಗೆ ದೇವಿಯನ್ನು ಗುಡಿದುಂಬಿಸುತ್ತಾರೆ. ದೇವಿಗೆ ಹಾಕಿದ ಹಾರ ಮತ್ತು ದೇವಿಯ ಪರಮ ಭಕ್ತನಾದ ಮರಿಯಜ್ಜನಿಗೆ ಹಾಕಿದ ಹಾರಗಳನ್ನು ಹಾಗೂ ದೇವಿಯ ಬಾವುಟಗಳನ್ನು ಭಕ್ತಾದಿಗಳ ಸಮ್ಮುಖದಲ್ಲಿ ಹರಾಜು ಮಾಡಿ ನಂತರ ಆ ಹರಾಜಿನಲ್ಲಿ ತೆಗೆದುಕೊಂಡ ಭಕ್ತಾದಿಗಳಿಗೆ ಅರ್ಪಿಸುತ್ತಾರೆ.

ಅದೇ ದಿನ ಸಂಜೆ ದೇವಿಯ ಮುಂದೆ 'ರಾಸವಾಳ' ಎಂಬ ಎಡೆಯನ್ನು ದೇವಾಲಯದ ಹೊರ ಭಾಗದಲ್ಲಿ ಸಾವಿರಾರು ಭಕ್ತಾದಿಗಳು ಜಾತಿ ಭೇದವಿಲ್ಲದೇ ಒಬ್ಬರನ್ನೊಬ್ಬರು ಕುಳಿತು ಅರ್ಚಕ ವಂಶದವರು ಮಾಡಿದ ಪ್ರಸಾದವನ್ನು ಸ್ವೀಕರಿಸುತ್ತಾರೆ. ನಂತರ ದೇವಾಲಯದ ಹೊರಭಾಗದಲ್ಲಿ ಕುಳಿತಿರುವ ಭಕ್ತಾದಿಗಳು ಪ್ರಸಾದವನ್ನು ಸ್ವೀಕರಿಸುತ್ತಾರೆ. ಇವರು ಇಂತಹ ಧಾರ್ಮಿಕ ದೈವತ್ವದಲ್ಲಿ ನಂಬಿಕೆಯಿಂದ ಭಾವೈಕ್ಯತೆಗೆ ಬದುಕು ಸಾಗಿಸುತ್ತಾರೆ. ಹಾಗೆಯೇ ಅರಸಿಕೇರಿಯ ಪೂರ್ವ ದಿಕ್ಕಿನಲ್ಲಿರುವ ಬಾದಾಮಿ ಚಾಲುಕ್ಯರ ಆರನೇ ವಿಕ್ರಮಾದಿತ್ಯನು ಕಟ್ಟಿಸಿದ ಶಿವ ದೇವಾಲಯವಿದ್ದು, ಶಿವನ ಮುಂದಿನ ಆಳೆತ್ತರದ ನಂದಿ ವಿಗ್ರಹ ಕಂಡ ಶಿವನೊಂದಿಗೆ ಪೂಜೆಗೆ ಅರ್ಹವಾಗಿದೆ. ಇಲ್ಲಿ ಕೂಡಾ ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ಕಾರ್ತಿಕೋತ್ಸವ ಜರುಗುತ್ತದೆ. ಈ ಕಾರ್ತಿಕೋತ್ಸವದಲ್ಲಿ ಅರಸಿಕೇರಿ ಮತ್ತು ಸುತ್ತ ಮುತ್ತಲಿನ ಹತ್ತು ಹಳ್ಳಿಯ ಭಕ್ತರು ಕೂಡಿಕೊಂಡು ಮೈಕೊರೆಯುವ ಚಳಿಯಲ್ಲಿ ಬೆಳದಿಂಗಳ ರಾತ್ರಿಯಲ್ಲಿ ಸಾಮೂಹಿಕವಾಗಿ ಪ್ರಸಾದವನ್ನು ಸ್ವೀಕರಿಸುತ್ತಾರೆ. ಹಾಗೆಯೇ ಊರ ಮಧ್ಯದಲ್ಲಿರುವ ಕೋಲಶಾಂತೇಶ್ವರ ಕಾರ್ತಿಕೋತ್ಸವವನ್ನು ಸಾಮೂಹಿಕವಾಗಿ ಆಚರಿಸುತ್ತಾರೆ.

## ೧.೫. ಶೈಕ್ಷಣಿಕತೆ

ಈ ಗ್ರಾಮವು ಸಾಮಾಜಿಕವಾಗಿ ತನ್ನದೇ ಆದ ಪ್ರತಿಷ್ಠೆ ಉಳಿಸಿಕೊಂಡಂತೆ ಶೈಕ್ಷಣಿಕವಾಗಿ ತನ್ನದೇ ಆದ ಮಹತ್ವದ ಸ್ಥಾನ ಪಡೆದುಕೊಂಡಿದೆ. ಶಿಶು ವಿಹಾರದಿಂದ ಪ್ರಾರಂಭವಾದ ಶಿಕ್ಷಣ ಪ್ರಾಥಮಿಕ ಶಾಲೆ ಮಾತ್ರ ಸರಕಾರದ್ದು. ಇದನ್ನು ಬಿಟ್ಟರೆ ಖಾಸಗಿ ಸಂಸ್ಥೆಗಳು ಶೈಕ್ಷಣಿಕವಾಗಿ ಮಹತ್ತರವಾದ ಪಾತ್ರವಹಿಸಿದೆ. ಇನ್ನೊಂದು ಖಾಸಗಿಯ ಪ್ರಾಥಮಿಕ ಶಾಲೆಯಿದ್ದು, ತದನಂತರ ಉಜ್ಜಯಿನಿಯ ಸಂಸ್ಥೆಯು ಸದರಿ ಗ್ರಾಮದಲ್ಲಿ ಜೆ.ಡಿ.ವಿ.ಎಸ್. ಪ್ರೌಢಶಾಲೆಯನ್ನು ತೆರೆದು ಸುತ್ತಮುತ್ತಲಿನ ಹತ್ತು ಹಳ್ಳಿಯ ಬಡ ಮಕ್ಕಳಿಗೆ ಶಿಕ್ಷಣವನ್ನು ನೀಡಿ ಆದರ್ಶ ವ್ಯಕ್ತಿಗಳನ್ನಾಗಿ, ಮಾನವೀಯ ಮೌಲ್ಯಗಳನ್ನು ಬೆಳೆಸಿ ಸಮಾಜದಲ್ಲಿ ಸತ್ಪ್ರಜೆಗಳನ್ನಾಗಿ ಬೆಳೆಸುವಲ್ಲಿ ನೀಡಿದ ಕೀರ್ತಿ ಶ್ರೀ ಸದ್ಧರ್ಮ ಉಜ್ಜಯನಿಯ ಸಂಸ್ಥೆಗೆ ಸಲ್ಲುತ್ತದೆ. ಪದವಿ ಪೂರ್ವ ಮಹಾವಿದ್ಯಾಲಯವು ಖಾಸಗಿ ಸಂಸ್ಥೆಯಾಗಿದ್ದು, ಇಲ್ಲಿ ಸರ್ಕಾರಿ ವಸತಿ ನಿಲಯದ ಸೌಲಭ್ಯವಿರುವುದರಿಂದ ಸುತ್ತ ಮುತ್ತಲಿನ ಹಳ್ಳಿಯ ಪರಿಶಿಷ್ಟ ವರ್ಗದ ಮತ್ತು ಇತರೇ ವರ್ಗದ ಎಲ್ಲಾ ವಿದ್ಯಾರ್ಥಿಗಳಿಗೂ ವಿದ್ಯಾಭ್ಯಾಸ ನೀಡಲು ದೇವರಾಜ ಅರಸು ಸಂಸ್ಥೆಯು ನಿರಂತರವಾಗಿ ಶಿಕ್ಷಣ ನೀಡುತ್ತಾ ಬಂದಿದೆ. ಇಷ್ಟೆಲ್ಲಾ ಶೈಕ್ಷಣಿಕ ಸೌಲಭ್ಯಗಳಿದ್ದರೂ ಕೂಡಾ ಇಲ್ಲಿ ಬಾಲ ಕಾರ್ಮಿಕರ ನೀತಿ ಬದಲಾಗಿಲ್ಲ. ಅನೇಕ ಮಕ್ಕಳು ಶಾಲೆಯನ್ನು ತೊರೆದು ವಿದೇಶಿಯ

ಬೀಜೋತ್ಪಾದನೆ ತಯಾರಿಸುವ ಕಂಪನಿಯಲ್ಲಿ ಕೆಲಸಕ್ಕೆ ಹೊರಡುವುದು ವಿಷಾದನೀಯ, ಆದರೂ ಬಡ ಕುಟುಂಬದ ಮಕ್ಕಳಿಗೆ ಇದು ಅನಿವಾರ್ಯವಾಗಿದೆ. ವಿದ್ಯಾಭ್ಯಾಸಕ್ಕಿಂತಲೂ ದೈನಂದಿನ ಬದುಕು ಬಹಳ ಮುಖ್ಯವಾಗಿರುತ್ತದೆ. ಎಕೆಂದರೆ ಹೊಟ್ಟೆಯನ್ನು ಹೊರೆದುಕೊಳ್ಳುವಷ್ಟು ನಿರ್ಗತಿಕರಾದಾಗ ಇನ್ನು ಇವರ ಪಾಲಿಗೆ ಶಿಕ್ಷಣ ಶೂನ್ಯ. ಇವತ್ತಿನ ಸರಕಾರ ಬಿಸಿಊಟದಂತ ಯೋಜನೆಗಳು ಬಹಳ ಸಹಕಾರಿಯಾಗಿರುತ್ತದೆ. ಅನೇಕ ಶಾಲೆಗಳಲ್ಲಿ ಶಿಕ್ಷಣ ನೀಡುವುದಕ್ಕಿಂತ ಬಿಸಿಊಟದ ನೆಪದಲ್ಲಿ ಕಾಲಹರಣ ಮಾಡುವವರ ಸಂಖ್ಯೆ ಹೆಚ್ಚಾಗಿದೆ. ಕೋಲಶಾಂತೇಶ್ವರ ಮಠದ ಶ್ರೀ ಶಾಂತಲಿಂಗ ದೇಶಿಕೇಂದ್ರ ಸ್ವಾಮಿಗಳು ಸ್ಥಾಪಿಸಿದ ಕೈಗಾರಿಕ ತರಬೇತಿ ಕೇಂದ್ರದಿಂದ ತಂತ್ರಜ್ಞಾನ ಶಿಕ್ಷಣ ನೀಡಿ ಅನೇಕ ಯುವಕ ಯುವತಿಯರಿಗೆ ಬದುಕಿನಲ್ಲಿ ಭವಿಷ್ಯವನ್ನು ರೂಪಿಸಿದ ಕೀರ್ತಿ ಈ ಸಂಸ್ಥೆಗೆ ಸಲ್ಲುತ್ತದೆ. ಈ ಭಾಗವು ಶಿಕ್ಷಣಕ್ಕೆ ಹೆಚು ಮಹತ್ವ ಪಡೆದಿದೆ. ಉನ್ನತ ಶಿಕ್ಷಣವನ್ನು ಕಲಾ, ವಿಜ್ಞಾನ, ಮತ್ತು ವಾಣಿಜ್ಯ, ವಿಭಾಗಗಳಲ್ಲಿ ಉನ್ನತ ಶಿಕ್ಷಣ ಪಡೆದವರಿದ್ದಾರೆ.

### ೧.೬. ರಾಜಕೀಯತೆ

ಈ ನೆಲವು ಪ್ರಾಚೀನ ಕಾಲದಿಂದಲೂ ರಾಜಕೀಯ ಕ್ಷೇತ್ರದಲ್ಲಿ ತನ್ನದೇ ಆದ ಛಾಪು ಮೂಡಿಸಿದೆ. ಇದಕ್ಕೆ ಇಂದಿಗೂ ಕೂಡಾ ನಿದರ್ಶನವಾಗಿದೆ. ಅರಸಿಕೇರಿ ಪಕ್ಕದಲ್ಲಿರುವ ಕೆರೆಗುಡಿ ಹಳ್ಳಿಯಲ್ಲಿ ಶ್ರೀ ಬಸವೇಶ್ವರ ದೇವಸ್ಥಾನ ಮತ್ತು ಅರಸಿಕೇರಿ ಮಧ್ಯದಲ್ಲಿ ಹರಿಹರೇಶ್ವರ ದೇವಸ್ಥಾನ ಕಲ್ಯಾಣ ಚಾಲುಕ್ಯ ದೊರೆಯಾದ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ನಿರ್ಮಾಣವಾದವು. ಮತ್ತು ಅರಸಿಕೇರಿ ಪಶ್ಚಿಮ ದಿಕ್ಕಿನಲ್ಲಿರುವ ನರಸಪ್ಪಗುಡ್ಡದಲ್ಲಿ ಐದು ಕೋಟೆಗಳು ಇಂದಿಗೂ ನಿದರ್ಶನವಾಗಿದೆ.

ಅರಸಿಕೇರಿಯಿಂದ ಹದಿನೈದು ಕಿ.ಮೀ. ದೂರದಲ್ಲಿರುವ ಉಚ್ಚಂಗಿದುರ್ಗ ಪಾಳೆಗಾರ ಆಳ್ವಿಕೆಗೆ ಒಳಪಟ್ಟಿತ್ತು. ಅಲ್ಲದೇ ಅರಸಿಕೇರಿಯಿಂದ ಹದಿನಾರು ಕಿ.ಮೀ.ದೂರದಲ್ಲಿ ಹರಪನಹಳ್ಳಿಯ ಆಳ್ವಿಕೆಗೆ ಒಳಪಟ್ಟಿತ್ತು. ಅಲ್ಲದೇ ಎಲ್ಲಾ ಸಂಸ್ಥಾನಗಳ ಪ್ರಭಾವದಿಂದ ಅರಸಿಕೇರಿಯು ಹಿಂದಿನ ದಿನಮಾನದಲ್ಲಿ ಅರಸಿ ಆಳುತ್ತಿದ್ದಳೆಂದು ತಿಳಿದು ಬರುತ್ತದೆ. ಅರಸಿಕೇರಿಗೂ ಬಳ್ಳಾರಿಗೂ ನೇರ ಸಂಬಂಧವಿತ್ತೆಂದು ತಿಳಿಯುತ್ತದೆ. ಇವರಿಗೆ ರಾಜನಿಗೆ ವಿಶೇಷ ಸಂದರ್ಭಗಳಲ್ಲಿ ರಾಜನಿಗೆ ಅಧೀನಳಾಗಿ ಆಳ್ವಿಕೆ ನಡೆಸುತ್ತಿದ್ದಳು. ಇವರ ರಾಜನಿಗೆ ವಿಶೇಷ ಸಂದರ್ಭಗಳಲ್ಲಿ ಸೈನ್ಯ ರವಾನೆ ಅಲ್ಲದೇ ವಿಜಯೋತ್ಸವ ಸಂದರ್ಭವು ಎರಡು ಸಂಸ್ಥಾನಗಳು ಆಚರಿಸಿಕೊಳ್ಳುತ್ತಿವೆ. ಪ್ರಾಂತಕ್ಕೆ ರಾಜಕೀಯ ಸಂಬಂಧವಿರುವದನ್ನು ಕಾಣಬಹುದಾಗಿದೆ. ರಾಜಕೀಯ ದಿನಗಳು ಬದಲಾದಂತೆ ಈ ಬದಲಾದ ಜನರು ತಮ್ಮ ಅಸ್ಥಿತ್ವವನ್ನು ಉಳಿಸಿಕೊಂಡಿದ್ದಾರೆ. ತಾಲೂಕಿನ ರಾಜಕೀಯದಲ್ಲಿ ಚಂದ್ರಪ್ಪ ಇನ್ನೂ ಅನೇಕ ವ್ಯಕ್ತಿಗಳಿಂದ ಅಲ್ಲದೇ ಜಿಲ್ಲಾ ರಾಜಕಿಯದಲ್ಲಿ ದೇವೆಂದಪ್ಪ ಮತ್ತು ತಿಮ್ಮಣ್ಣ ಇತರ ಅನೇಕ ವ್ಯಕ್ತಿಗಳು ಕೂಡಾ ತಮ್ಮ ರಾಜಕೀಯ ಅಸ್ಥಿತ್ವವನ್ನು ಉಳಿಸಿಕೊಂಡ ವ್ಯಕ್ತಿಗಳಿದ್ದಾರೆ.

**ಟಿಪ್ಪಣಿ**

೧. ಕುಂಬಾಸ. ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ೧೯೯೦ ಪುಟ– ೬೩

# ಅಧ್ಯಾಯ ೨

# ದಂಡಿ ದುರುಗಮ್ಮನ ಪರಿಕಲ್ಪನೆ

### ೨.೧ ಪದ ನಿಷ್ಪತ್ತಿ

| | | |
|---|---|---|
| ದಂಡಿನ | – | ಘನತೆ, ಗೌರವ, ಶಕ್ತಿ, ಸಾಮರ್ಥ್ಯ |
| ದಂಡು | – | ಸೈನ್ಯ, ಪಡೆ, ಗುಂಪು |
| ದಂಡಿನವನು | – | ಸೈನಿಕ |
| ದುರ್ಗ | – | ಕೋಟೆ, ಅರಣ್ಯ, ಅಡವಿ |
| ದುರ್ಗಿ | – | ಪಾರ್ವತಿ |
| ದಂಡಿನ + ದುರ್ಗಿ | = | ದಂಡಿದುರ್ಗಿ |

ದುಷ್ಟರ ದಂಡನ್ನೂ ಸಂಹರಿಸಿ, ಕೋಟೆಯನ್ನು ರಕ್ಷಿಸಿದ್ದಕ್ಕಾಗಿ, ದಂಡಿನ ದುರ್ಗಿಯಾದಳು. ಶಿವೆಯ ಶಕ್ತಿ ಸ್ವರೂಪಳಾದ ಆದಿ ಪುರಾಣ ಶಕ್ತಿಯೂ ಹೌದು "ಶ" ಎಂದರೆ ಸುಖ ಸಂಪತ್ತು, "ಕ್ತಿ"ಎಂದರೆ ಶಕ್ತಿ, ಅಂದರೆ ಶಕ್ತಿ ಮತ್ತು ಶೌರ್ಯಗಳನ್ನು ಒಳಗೊಂಡಿರುವ ಸಾಕಾರ ಸ್ವರೂಪವೇ ಈ ಶಕ್ತಿ ದೇವತೆ ಅಥವಾ ಸುಖ – ಸಂಪತ್ತು ಹಾಗೂ ಶಕ್ತಿಯನ್ನು ನೀಡುವಳು ಎಂದು ಅರ್ಥವಾಗುತ್ತದೆ.

ಭೂಲೋಕದಲ್ಲಿ ಅನ್ಯಾಯ, ಅನಾಚರಗಳು ಹೆಚ್ಚಾದಂತೆಲ್ಲಾ ಭೂತಾಯಿಯ ಒಡಲು ಪಾಪ ಕರ್ಮಗಳ ತಾಣವಾಗಿ ಪರಿಣಮಿಸಿತು. ಇದರಿಂದ ಮನನೊಂದ ಭೂತಾಯಿಯು ಈ ಪಾಪದ ಭಾರವನ್ನು ಸಹಿಸಲಾಗದೇ ದೇವಲೋಕದ ಮಹೇಶ್ವರನ ಮೋರೆ ಹೋಗುತ್ತಾಳೆ. ದೇವಲೋಕದ ದೇವಾನು ದೇವತೆಗಳ ಸಮ್ಮುಖದಲ್ಲಿ ತನ್ನ ನೋವನ್ನು ಪರಮಾತ್ಮನಲ್ಲಿ ಹೇಳಿಕೊಂಡು. ನಾನು ಈ ಪಾಪದ ಭಾರವನ್ನು ಹೊರಲಾರೆ ಎಂದು ಗೋಳಿಟ್ಟು ಈ ಪಾಪ ಕರ್ಮಗಳು ನಿವಾರಣೆಯಾಗುವವರೆಗೂ ನಾನು ಭೂಲೋಕಕ್ಕೆ ಹೋಗಲಾರೆ ಎಂದಳು.

ಭೂ ಮಾತೆಯ ಕರೆಗೆ ಓಗೊಟ್ಟು ಶಿವನ ಸತಿಯಾದ ಪಾರ್ವತಿಯನ್ನು ಭೂ ಲೋಕದಲ್ಲಿ ನೀನು ದುರ್ಗಿಯಾಗಿ ಪಾಪ ಕರ್ಮಗಳನ್ನೆಲ್ಲಾ ಹೋಗಲಾಡಿಸಿ, ದುರ್ಜನರನ್ನು ಶಿಕ್ಷಿಸಿ, ಸಜ್ಜನರನ್ನು ಉದ್ದರಿಸಿ ಭೂತಾಯಿಯ ಒಡಲಿಗೆ ಶಾಂತಿಯನ್ನು ನೀಡು ಎಂದು ಆಜ್ಞಾಪಿಸಿದನು. ಆದರೆ ನಿಮ್ಮನ್ನು ಬಿಟ್ಟು ನಾನೊಬ್ಬಳೇ ಶಕ್ತಿಯಾಗಿ ಭೂಲೋಕದಲ್ಲಿ ಸಂಚರಿಸಲಾರೆ, ನನ್ನಿಂದ ಈ ಕೆಲಸ ಸಾಧ್ಯವಿಲ್ಲ ಎಂದಾಗ ಶಿವನು ಹಿಂದೆ ಶುಂಭ ನಿಶುಂಭರನ್ನು ಮತ್ತು ರಕ್ತ ಬಿಜಾಸುರರನ್ನು ಮತ್ತು ಮಹಿಷನನ್ನು ಕೊಂದು ದೇವತೆಗಳಿಗೆ ಶಾಂತಿ ನೀಡಿ ಧರ್ಮದ ದೇವತೆ ನೀನೇ ಎಂದು ಹಿಂದೆ ನಡೆದ ಎಲ್ಲಾ

ದುಷ್ಟಂತಗಳನ್ನು ಮನವರಿಕೆ ಮಾಡಿ ಈಗ ಭೂತಾಯಿಗೆ ಬಂದ ಕಷ್ಟವನ್ನು ನಿವಾರಿಸಲು ನಿನ್ನಿಂದ ಮಾತ್ರ ಸಾದ್ಯ. ಅದಕ್ಕಾಗಿ ನೀನು ಭೂಲೋಕದಲ್ಲಿ ದುರ್ಗಿಯಾಗಿ ಅವತರಿಸಲೇಬೇಕೆಂದಾಗ ತನ್ನ ಪತಿಯ ಮಾತಿಗೆ ಶರಣಾಗಿ ಪಾರ್ವತಿಯು ಭೂತಾಯಿಯ ಶಾಂತಿ ನೀಡಲು ಪೂರ್ವ ದಿಕ್ಕಿನಲ್ಲಿ ಅವತರಿಸಿದಳು.

## ೨.೨ ಐತಿಹ್ಯದ ಪ್ರಕಾರ

ಒಮ್ಮೆ ಕೈಲಾಸದಲ್ಲಿ ಶಿವ ಮತ್ತು ಪಾರ್ವತಿಯರು ನಂದಿ, ಭೃಂಗಿ, ಭೂದೇವಿಯರೊಡನೆ ಸಮಾಲೋಚನೆ ನಡೆಸುವ ಸಂದರ್ಭದಲ್ಲಿ ಭೂಲೋಕದಲ್ಲಿ ಪಾಪಕರ್ಮಗಳ ವಿಚಾರ ಬಂದಾಗ ಆ ಕರ್ಮಗಳ ನಿವಾರಣೆಗೆ ಪಾರ್ವತಿಯೂ ಭೂದೇವಿಗೆ ಭೂಲೋಕದಲ್ಲಿ ದುರ್ಗಿಯ ರೂಪ ಅವತರಿಸೆಂದು ಆದೇಶಿಸಿದಳು. ಆ ಸಂದರ್ಭದಲ್ಲಿ ಬಳ್ಳಾರಿಯಲ್ಲಿ ರಾಜರು ಆಳ್ವಿಕೆ ನಡೆಸುತ್ತಿದ್ದರು. ಆ ರಾಜನ ಅಧೀನಳಾಗಿ ಅಂಬಕ್ಕ ರಾಣಿಯಾಗಿ ದಕ್ಷಿಣ ಭಾಗದಲ್ಲಿರುವ ಅರಸಿಕೇರಿ ಆಳುತ್ತಿದ್ದಳು. ಒಮ್ಮೆ ರಾಜನಗೆ ಓಲೆಯನ್ನು ಕೊಡುವ ಸಂದರ್ಭ ಬರುತ್ತದೆ. ಓಲೆಕಾರರಾದ ಹರಿಜನ ಸೋಮಪ್ಪ, ಸಂಗಪ್ಪ ಮತ್ತು ಮರಿಯಜ್ಜ ಇವರುಗಳಿಗೆ ಓಲೆಯನ್ನು ಕೊಟ್ಟು ಬರಲು ಆಜ್ಞೆ ಮಾಡಿದಳು. ಅದರಲ್ಲಿ ಸೋಮಪ್ಪ, ಮತ್ತು ಸಂಗಪ್ಪ ಸ್ಥಿತಿವಂತರಾಗಿದ್ದರು. ಆದರೆ ಮರಿಯಜ್ಜ ಬಹಳ ಬಡತನದಲ್ಲಿದ್ದು ಒಪ್ಪತ್ತಿನ ಊಟಕ್ಕೆ ಇಲ್ಲದೇ ನಿರ್ಗತಿಕನಾಗಿದ್ದನು. ಒಂದು ದಿವಸ ಗೊತ್ತುಪಡಿಸಿಕೊಂಡು ಓಲೆಯನ್ನು ಕೊಡಲು ಬಳ್ಳಾರಿಗೆ ಹೋಗಲು ಸಿದ್ಧತೆ ನಡೆಸಿದರು. ಹೋಗುವಾಗ ಸಂಗಪ್ಪ ಮತ್ತು ಸೋಮಪ್ಪನವರು ದಾರಿಯಲ್ಲಿ ಊಟಕ್ಕೆ ಕುಳಿತರು. ಸಹೋದರನಾದ ಮರಿಯಜ್ಜನಿಗೆ ಊಟಕ್ಕೆ ಕರೆಯಲಿಲ್ಲ. ಊಟವಿಲ್ಲದೇ ಹಸಿವಿನಿಂದ ಮರಿಯಜ್ಜ ಬಹಳ ನಿಶ್ಶಕ್ತನಾಗಿದ್ದನು, ಆದರೂ ಅಡವಿಯಲ್ಲಿ ಗಡ್ಡೆ, ಗೆಣಸು, ಹಣ್ಣುಗಳನ್ನು ತಿನ್ನುತ್ತಾ ಅವರನ್ನು ಹಿಂಬಾಲಿಸಿದನು. ಅವರು ಬಳ್ಳಾರಿಯ ಹತ್ತಿರ ಹೋಗುತ್ತಿದ್ದಂತೆ ಬಳ್ಳಾರಿಯ ಜನ ಶವವನ್ನು ಸಂಸ್ಕಾರಕ್ಕಾಗಿ ಸ್ಮಶಾನಕ್ಕೆ ಕೊಂಡೊಯ್ಯುತ್ತಿದ್ದರು. ಇವರು ಅದೇ ದಾರಿಯಲ್ಲಿ ಹೋಗುತ್ತಿದ್ದರು. ಇವರಿಗೆ ಎದುರಾದ ಜನ ನೀವು ಯಾರು ? ಎಂದು ವಿಚಾರಿಸಿದರು. ನಾವು ಅರಸಿಕೇರಿಯ ರಾಣಿಯ ಕಡೆಯವರು, ಓಲೆಯ ಒಪ್ಪಿಸಲು ಬಳ್ಳಾರಿಗೆ ಬಂದಿದ್ದೇವೆ ಎಂದರು. ಆಗ ಶವ ಹೋರುತ್ತಿದ್ದ ಜನ ಹೇಳಿದ ಮಾತಿಗೆ ದಿಗ್ಭ್ರಾಂತರಾದರು. ಊರಲ್ಲಿ ದುರ್ಗಿಯ ಬ್ಯಾನಿ ಬಂದಿದೆ. ಊರೊಳಗೆ ಹೋದವರು ತಿರುಗಿ ಬರುವುದು ಅಸಾಧ್ಯ ಎಂದು ತಿಳಿಸಿದರು. ಈ ಸುದ್ಧಿ ಕೇಳಿದ ಸೋಮಪ್ಪ, ಮತ್ತು ಸಂಗಪ್ಪ ಅಲ್ಲಿಂದ ಹಿಂದುರಿಗಿದರು. ಇವರನ್ನು ಹಿಂಬಾಲಿಸುತ್ತಿದ್ದ ಮರಿಯಜ್ಜನಿಗೆ ಪ್ರೀತಿಯಿಂದ ಮಾತನಾಡಿಸಿದರು. ಅಲ್ಲದೇ ನಮಗೆ ಪಕ್ಕದ ನಾಗಲಾಪುರದಲ್ಲಿ ಕೆಲಸವಿದೆ. ನಾವಿಬ್ಬರೂ ಈ ಕೆಲಸ ಮುಗಿಸುತ್ತೇವೆ. ಅಷ್ಟೊತ್ತಿಗೆ ನೀನು ರಾಜನಿಗೆ ಓಲಿಯನ್ನು ಕೊಟ್ಟು ಬಾ ಎಂದರು. ಅವರ ತಂತ್ರವನ್ನು ಅರಿಯದ ಮುಗ್ದ ಮರಿಯಜ್ಜ ರಾಣಿ ಒಪ್ಪಿಸಿದ ಕೆಲಸವನ್ನು ಭಯ ಭಕ್ತಿಯಿಂದ ಮಾಡಲು ಸಿದ್ಧನಾದನು.

ರಾಜನಿಗೆ ಓಲೆಯನ್ನು ಒಪ್ಪಿಸಿ, ತಿರುಗಿ ಬರುವಾಗ ದಾರಿಯಲ್ಲಿ ಮೂರ್ಛೆ ಬಂದು ಬೀಳುತ್ತಾನೆ. ಇದನ್ನು ನೋಡುತ್ತಿದ್ದ ಪಾರ್ವತಿಯು ಕನಿಕರದಿಂದ ಮರಿಯಜ್ಜನಿಗೆ ಎಚ್ಚರಗೊಳಿಸಿ ಬೆತ್ತವನ್ನು

ಊರುಗೋಲಾಗಿ ತೆಗೆದುಕೊಳ್ಳುವಂತೆ ಅಶರೀರ ವಾಣಿಯ ಮೂಲಕ ನುಡಿದಳು. ತಿರುಗಿ ಬರುವಾಗ ಎಂಟು ದಿವಸಗಳ ಹಿಂದೆ ಬಿಟ್ಟು ಬಂದ ತನ್ನ ದಂಡ್ಯೆಪ್ಪನ ನೆನಪಾಗಿ ಸಮೀಪದ ಅಡವಿಯ ಕೊಟ್ಟೂರು ಮರಡಿಯಲ್ಲಿ ಕಟ್ಟಿಗೆ ಮಾಡಿಕೊಂಡು ಬಂದ ಹಣದಿಂದ ನಾನು ಮತ್ತು ನನ್ನ ಮಗ ಊಟ ಮಾಡಬಹುದೆಂದು ಭಾವಿಸಿದ. ಸಮೀಪದಲ್ಲಿ ಸಿಕ್ಕ ಕಟ್ಟಿಗೆಯನ್ನು ಒಂದು ಹೊರೆ ಮಾಡಿಕೊಂಡು ಆ ಹೊರೆಯಲ್ಲಿ ಪಾರ್ವತಿ ದೇವಿ ಲೀನವಾಗಿದ್ದ ಕಟ್ಟಿಗೆಯೂ ಸೇರಿಕೊಂಡಿತ್ತು. ಹೊರೆಯನ್ನು ಮೇಲೆ ಹೊತ್ತುಕೊಳ್ಳಲು ಪ್ರಯತ್ನಿಸಿದನು. ಆ ಹೊರೆ ಒಂದು ಇಂಚು ಕದಲಲಿಲ್ಲ. ಇದಕ್ಕೆ ತನ್ನದೇ ಆದ ಕಾರಣಗಳನ್ನು ಹೇಳಿಕೊಂಡು ಸಮಾದಾನ ಮಾಡಿಕೊಂಡನು. ಯಾವುದೊಂದು ಪ್ರತಿಫಲವು ಫಲಕಾರಿಯಾಗಲಿಲ್ಲ. ಬೇಸತ್ತು ಕೊನೆಗೆ ಉಪವಾಸವಿದ್ದರೂ ಸರಿಯೇ ಇದರ ಸಹವಾಸ ಬೇಡವೆಂದು ಹೊರೆಯನ್ನು ಅಲ್ಲಿಯೇ ಬಿಟ್ಟು ಹೊರಡಲು ಸಿದ್ದನಾದನು. ಅಷ್ಟರಲ್ಲಿ ಕಟ್ಟಿಗೆಯಲ್ಲಿ ಪ್ರವೇಶ ಮಾಡಿದ್ದ ದೇವಿ ಹೊರೆಯ ಮೇಲೆ ಮಗುವಾಗಿ ಅವತರಿಸಿದಳು. ಇದನ್ನು ಕಂಡ ಮರಿಯಜ್ಜ ಹೆದರಿ ಓಡಲಾರಂಭಿಸಿದನು.

ದೇವಿ ಹೆಂಗಸಿನ ರೂಪ ಪಡೆದು ಮರಿಯಜ್ಜನಗೆ ಮಗನೇ ಎಂದು ಕರೆದಳು. ಇದರಿಂದ ಮತ್ತಷ್ಟು ಹೆದರಿ ಮರಿಯಜ್ಜ ಇದಾವುದೋ ಪಿಶಾಚಿ ಇರಬೇಕೆಂದು ತಿಳಿದು ಮತ್ತಷ್ಟು ವೇಗವಾಗಿ ಓಡುತ್ತಿದ್ದ ಆಗ ದೇವಿಯು ಮಗನೇ ನಾನು ಪಿಶಾಚಿಯಲ್ಲ. ನಿನ್ನ ವಂಶವನ್ನು ಬೆಳಗಿಸುವ ದೇವಿ ನಾನು ನಿನ್ನ ಕಷ್ಟಗಳನ್ನು ಪರಿಹರಿಸಲು ಬಂದಿದ್ದೇನೆ. ಹೋಗಬೇಡ ನಿಲ್ಲು ಎಂದಳು. ಸುದಾರಿಸಿಕೊಂಡ ಮರಿಯಜ್ಜ ನೀನು ದೇವಿ ಅಂತ ನಂಬುವುದಾದರೂ ಹೇಗೆ? ಎಂದನು. ಆಗ ದೇವಿ ನಿನ್ನ ಹೆಗಲ ಮೇಲೆ ಇರುವ ಕಂಬಳಿಯಲ್ಲಿ ನೀನು ಹೊರುವಷ್ಟು ಮರಳನ್ನು ಕಟ್ಟಿಕೊಂಡು ಪಕ್ಕದಲ್ಲಿರುವ ಮುಚ್ಚಳ ಮತ್ತು ಮಗಿಯನ್ನು ಕಂಬಳಿಯಲ್ಲಿ ಹಾಕಿಕೊಂಡು ಮನೆಗೆ ಹೋಗಿ ಬಿಚ್ಚಿ ನೋಡು, ಆಗ ನಾನು ಯಾರೆಂದು ತಿಳಿಯುತ್ತದೆ. ಎಂದಳು ತಂದೆಯ ಹಾದಿಯನ್ನೇ ಕಾಯುತ್ತಿದ್ದ ಮಗ ದಂಡ್ಯೆಪ್ಪ ನಮ್ಮಪ್ಪ ಊರಿನಿಂದ ಏನೋ ತಂದಿರುವನೆಂದು ತಿಳಿದು ಕಂಬಳಿಯನ್ನು ಬಿಚ್ಚಿ ನೋಡುತ್ತಾನೆ.

ಆ ಕಂಬಳಿಯಲ್ಲಿದ್ದ ಮರಳು ಅಕ್ಕಿಯಾಗಿತ್ತು. ಮುಚ್ಚಳ ಮಗಿಗಳು ಬಂಗಾರದ ಪಾತ್ರೆಗಳಾಗಿದ್ದವು. ಇದನ್ನು ನೋಡಿದ ಮರಿಯಜ್ಜನ ಅಕ್ಕ ಹನುಮಂತಮ್ಮ ಇವುಗಳನ್ನು ಎಲ್ಲಿಂದ ಕದ್ದು ತಂದಿರುವೆ ಎನ್ನುತ್ತಾಳೆ. ಅದಕ್ಕೆ ಮರಿಯಜ್ಜ ನಾನು ಕಳ್ಳನಲ್ಲ. ಇದು ದೇವತೆ ಕೊಟ್ಟ ವರಪ್ರಸಾದವೆಂದು ಹೇಳಿದನು. ದೇವಿಯ ಬೆತ್ತವನ್ನು ಅಕ್ಕನಿಗೆ ತೋರಿಸುತ್ತಾ ಇದು ದೇವಿಯ ಬೆತ್ತ ಇದರಲ್ಲಿ ದೇವಿ ಇದ್ದಾಳೆ. ಎಂದು ಹೇಳಿದನು. ಪ್ರತಿ ದಿನ ಇದಕ್ಕೆ ಪೂಜೆ ಮಾಡಬೇಕೆಂದು ತಾನು ಪಡೆದುಕೊಂಡಿದ್ದ ಅಕ್ಕಿ ಬಂಗಾರ ಪಾತ್ರೆ ಸುದ್ದಿ ಊರಿಗೆಲ್ಲಾ ಹಬ್ಬಿತು. ಸೋಮಪ್ಪ ಮತ್ತು ಸಂಗಪ್ಪ ಇದನ್ನು ಬಳ್ಳಾರಿ ರಾಜರು ಕೊಟ್ಟು ಕಳಿಸಿರಬೇಕೆಂದು ಭಾವಿಸಿ, ಇದರಲ್ಲಿ ನಮಗೂ ಪಾಲು ಬರಬೇಕೆಂದು ಕೇಳಲು ಬರುತ್ತಾರೆ. ಇದಕ್ಕೆ ಮರಿಯಜ್ಜ ಹನ್ನೆರಡು ವರ್ಷದ ಮಗ ದಂಡ್ಯೆಪ್ಪ ಅದಕ್ಕೆ ಆಕ್ಷೇಪವೆತ್ತುತ್ತಾನೆ ಇದು ದೇವಿ ಕೊಟ್ಟ ವರಪ್ರಸಾದ ಎನ್ನತ್ತಾನೆ. ದುರ್ಗಾದೇವಿಯ ಕರುಣೆಯಿಂದ ಮರಿಯಜ್ಜನ ಮನೆತನದ ಶ್ರೀಮಂತಿಕೆ

ಹೆಚ್ಚಾಗುತ್ತದೆ. ಊರಿನ ಶ್ರೀಮಂತನಾದ ಈಡಿಗರ ಲಚ್ಚಮ್ಮನ ಮನೆಯಲ್ಲಿ ಸ್ವಾಭಾವಿಕವಾಗಿ ಎಮ್ಮೆ ಸತ್ತಿರುತ್ತದೆ. ಮರಿಯಜ್ಜನ ಏಳಿಗೆಯನ್ನು ಸಹಿಸದ ಸಂಗಪ್ಪ ಮತ್ತು ಸೋಮಪ್ಪನವರು ಈ ಸಂದರ್ಭವನ್ನು ಸದುಪಯೋಗ ಪಡಿಸಿಕೊಳ್ಳಲು ನಿರ್ಧರಿಸುತ್ತಾರೆ. ಇದು ಸ್ವಾಭಾವಿಕ ಸಾವಲ್ಲ. ಮರಿಯಜ್ಜನೇ ಎಮ್ಮೆಗೆ ವಿಷ ಹಾಕಿದ್ದಾನೆಂದು ಸೋಮಪ್ಪ ಮತ್ತು ಸಂಗಪ್ಪನವರು ಲಚ್ಚಮ್ಮನಿಗೆ ದೂರು ಸಲ್ಲಿಸುತ್ತಾರೆ.

ಆಗ ಸಿಟ್ಟಿನಿಂದ ಲಚ್ಚಮ್ಮ ಮರಿಯಜ್ಜನಿಗೆ ತಕ್ಕ ಶಿಕ್ಷೆಯಾಗುವವರೆಗೂ ಎಮ್ಮೆಯನ್ನು ಯಾರು ಮುಟ್ಟುವಂತಿಲ್ಲವೆಂದು ಆಜ್ಞೆ ಮಾಡುತ್ತಾಳೆ. ಈ ವಿಷಯ ತಿಳಿದ ಮರಿಯಜ್ಜನಿಗೆ ನಿದ್ರೆ ಬರಲಿಲ್ಲ. ದೇವಿಯನ್ನು ಸ್ಮರಿಸುತ್ತಾ ಮಲಗಿಕೊಂಡನು. ಆಗ ದೇವಿಯೂ ಕನಸಿನಲ್ಲಿ ಪ್ರತ್ಯಕ್ಷಳಾಗಿ ನೀನು ಭಯಪಡಬೇಡ ನಿನಗೆ ಗಂಡಾಂತರ ಬಂದ ವಿಷಯ ತಿಳಿದಿದೆ. ನಾನು ನಿನ್ನನ್ನು ಪಾರು ಮಾಡುತ್ತೇನೆ. ಲಚ್ಚಮ್ಮ ಕರೆದರೆ ಹೋಗು, ಹೋಗುವಾಗ ಬಿದಿರಿನ ಬೆತ್ತ, ಬೇವಿನ ಸೊಪ್ಪು, ನನ್ನ ಆಧಾರವನ್ನು ತೆಗೆದುಕೊಂಡು ಹೋಗು ಎಮ್ಮೆ ಮೇಲೆ ನೀರನ್ನು ಸಿಂಪಡಿಸಿ, ಆದಾರವನ್ನು ಸವರಿ ಬೇವಿನ ಸೊಪ್ಪಿನಿಂದ ಮೂರು ಬಾರಿ ಎಮ್ಮೆಗೆ ಬಡಿ ಆಗ ಎಮ್ಮೆಗೆ ಜೀವ ಬರುತ್ತದೆ. ಅಲ್ಲದೇ ಬಳ್ಳಾರಿ ದಂಡಿನ ದುರ್ಗಿ ಎಲ್ಲಿದ್ದರೂ ಬಾ ಎಂದು ಪ್ರಾರ್ಥಿಸುತ್ತಾನೆ. ನಂತರ ನೀನು ಆ ಎಮ್ಮೆಯ ಹಾಲನ್ನು ಕರೆ ಅದು ಮೊದಲು ಎರಡು ಚೆಂಬಿಗೆ ರಕ್ತವನ್ನು ಅದನ್ನು ಚೆಲ್ಲಿ ನಂತರ ಎರಡು ಚೆಂಬಿಗೆ ಹಾಲನ್ನು ಕರೆ ಅದನ್ನು ಜನರಿಗೆ ತೋರಿಸಿ ಇದನ್ನು ದೇವಿಗೆ ಅರ್ಪಿಸುತ್ತೇನೆಂದು ಹಾಲು ಕುಡಿದನು. ದೇವಿ ಹೇಳಿದ ರೀತಿಯಲ್ಲಿ ಆತ ನಡೆದುಕೊಳ್ಳುತ್ತಾನೆ. ಎಮ್ಮೆಗೆ ಜೀವ ಬರುತ್ತದೆ. ಇದನ್ನು ಕಂಡ ಈಡಿಗರ ಲಚ್ಚಮ್ಮ ತನ್ನ ತಪ್ಪನ್ನರಿತು ಭಕ್ತಿಪೂರ್ವಕವಾಗಿ ಮರಿಯಜ್ಜನೇ ದೇವಿಯ ಪ್ರತಿರೂಪವೆಂದು ತಿಳಿದು 'ನೀನು ದೇವಿಯ ಸ್ವರೂಪ' ನನಗೆ ಏನು ಬೇಕು ಕೇಳೆಂದಳು. ಆಗ ಮರಿಯಜ್ಜ ನಿನ್ನ ಮನೆಯಿಂದ ಪ್ರತಿವರ್ಷ ಕಾರ್ತೀಕಮಾಸದಲ್ಲಿ ಎರಡು ಸೀರೆ ದೂತರಿಗೆ ಬಟ್ಟೆ, ನಿನ್ನ ಮನೆಯಲ್ಲಿ ಗಿಣ್ಣದ ಎಡೆ, ಪ್ರತಿ ವರ್ಷವೂ ನೀಡಬೇಕು ಎನ್ನುತ್ತಾಳೆ. ಈ ಪದ್ದತಿಯೂ ಇಂದಿಗೂ ಮುಂದುವರೆಯುತ್ತದೆ.

### ೨.೩. ದಂಡಿ ದುರುಗಮ್ಮ ದೇವಿಯ ಮೂಲ

"ದಂಡಿ ದುರುಗಮ್ಮ" ಉತ್ತರ ದಿಕ್ಕಿನಿಂದ ಹುಟ್ಟಿದಳೆಂಬ ಪ್ರತೀತಿಯಿದೆ. ದುರ್ಗಿ ಅವತಾರವೆಂದೆ ಕರೆಯಲ್ಪಡುತ್ತಾಳೆ. ದುರುಗಮ್ಮ ಮೂಲದಲ್ಲಿ ಬುಡಕಟ್ಟು ವರ್ಗಗಳನ್ನು ಸಂರಕ್ಷಿಸುವ ಹೊಣೆಗಾರಿಕೆಯನ್ನು ಹೊತ್ತು ಧರೆಯಲ್ಲಿ ಅವತರಿಸಿದ್ದಾಳೆ. "ದುಷ್ಟ ಶಿಕ್ಷೆ ಶಿಷ್ಟ ರಕ್ಷೆ" ಎಂಬ ನೀತಿಯನ್ನು ಹೊತ್ತು ದುಷ್ಟರನ್ನು ದಮನ ಮಾಡಿದ್ದಾಳೆ. ಅಶಾಂತಿ ನೆಲೆಸಿದ ಮನುಷ್ಯರ ಮನೆ ಮನಗಳಲ್ಲಿ ಶಾಂತಿ ಸಹನೆ ಸಹಬಾಳ್ವೆಯನ್ನು ತಂದು ಕೊಟ್ಟಿದ್ದಾಳೆ.

ಈ ದೇವಿಯ ಚರಿತ್ರೆಯನ್ನು ಅವಲೋಕನ ಮಾಡಿದರೆ, ೧೪ನೇ ಶತಮಾನದಲ್ಲಿ ಬರುವ ಮುಸ್ಲಿಂ ದಾಳಿಕೋರರು ರನ್ನದ ಕೋಟೆಯಲ್ಲಿರುವ ದೇವಿಯನ್ನು ಕೆಣಕಿದರೆ, ಆ ದೇವಿಯು ಆಕ್ರೋಶಗೊಂಡು ಶಿವನ ಸನ್ನದಿಗೆ ಹೋದಾಗ ಏಕೆ ಮಗಳೇ ಬಂದಿರುವೆ ಎಂದು ಕೇಳಿದಾಗ,

ದೇವಿಯ ಅವತಾರವನ್ನು ನೋಡಿದ ಶಿವನು ನಿನಗೆ ಯಾರು ಇದಿರಾಡ್ಯಾರ ಬ್ರಹ್ಮಾದಿಯರೇ ಎದುರಾಡಿ ಉಳಿದಿಲ್ಲ. ಈ ಭೂಲೋಕದಲ್ಲಿ ಯಾರು ನಿನಗೆ ಎದುರಾಡ್ಯಾರು ಅಪ್ಪ ನನಗೆ ಅಪ್ಪಣೆ ಕೊಡು ಅವನನ್ನ ಸರ್ವನಾಶ ಮಾಡುತ್ತೇನೆಂದಳು ಕೋಟೆಯನ್ನು ಮುತ್ತಿದ ದುಷ್ಟರ ದಂಡನ್ನು ಸಂಹರಿಸುತ್ತಾ ನಾಡಿನ ಮೇಲೆ ಮುತ್ತಿಗೆ ಹಾಕಿದ ದುಷ್ಟರ ರಕ್ತದ ಕಾಲುವೆ ಹರಿಸಿ, ಆ ಸಮೂಹವು ದುರ್ಗಿಯ ಆಕ್ರೋಶದಿಂದ ಕಂಡ ದುಷ್ಟರು ಭಯ, ಭೀತಿಗೊಂಡು ನಾಡಿನಿಂದ ಪಲಾಯಾನಗೊಂಡರು.

ತದನಂತರ ಸಾಮಾನ್ಯ ಕೆಳ ವರ್ಗದ ವ್ಯಕ್ತಿಯಲ್ಲಿ ಆತನ ಸ್ವಾಮಿನಿಷ್ಟೆಯನ್ನು ಮೆಚ್ಚಿ ಆತನಲ್ಲಿ ದುರ್ಗಿಯ ಪ್ರತಿ ರೂಪವಾಗಿ ಅವತರಿಸಿದಳು. ಮೊದಲು ಈ ದೇವಿಯು ಸ್ವಲ್ಪಮಟ್ಟಿಗೆ ಕಡಿಮೆಯಾಯಿತು. ಮರಿಯಜ್ಜನ ಮೂಲಕ ಪವಾಡಗಳನ್ನು ತೋರಿಸಿದಾಗ ಅಂದರೆ ಸತ್ತ ಎಮ್ಮೆಯನ್ನು ಬದುಕಿಸಿದಾಗ ಪವಾಡ ನಾಡಿನ ಉದ್ದಗಲಕ್ಕೂ ಸುದ್ದಿ ಪಸರಿಸಿತು. ಆಗ ದಿನಗಳು ಕಳೆದಂತೆ ದೇವಿ ಪ್ರಭಾವ ಹೆಚ್ಚುತ್ತಾ ಹೋದಂತೆ ಈ ಬುಡಕಟ್ಟು ವರ್ಗದ ಜನ ಈ ದೇವಿ ಕೃಪೆಯಿಲ್ಲದೇ ಹೋದರೇ ಒಂದು ಕ್ಷಣ ಬದುಕಲಾರೆವು. ಎನ್ನುವುದು ಇಲ್ಲಿಯ ಜನರ ನಂಬಿಕೆ. ಇಲ್ಲಿ ಬುಡಕಟ್ಟು ವರ್ಗದ ಸೀಮಿತವಾಗಿದ್ದ ಇಡೀ ನಾಡಿನ ಎಲ್ಲಾ ವರ್ಗದ ಜನರ ಪ್ರೀತಿಗೆ ಭಾಜನಳಾದಳು. ಭಕ್ತರೂ ಸಂಕಷ್ಟಕ್ಕೆ ತುತ್ತಾದಾಗ ದೇವಿಯ ಮೊರೆ ಹೋದರೆ ಅಲ್ಲಿ ಬಂದು ಪರಿಹರಿಸುತ್ತಾಳೆ ಎನ್ನುವುದು ಸಾಬೀತುಪಡಿಸಿದಳು. ನಂತರ ದಿನಗಳಲ್ಲಿ ದೇವಿಯ ಪ್ರತಿ ಸ್ವರೂಪಿಯಾದ ಮರಿಯಜ್ಜ ದಿನದಿಂದ ದಿನಕ್ಕೆ ಹೊಸ ಹೊಸ ಪವಾಡ ಶಕ್ತಿಯನ್ನು ತೋರಿಸುತ್ತಾ ಹೋದಂತೆ ಈ ದೇವಿಯ ಪ್ರಭಾವ ಹೆಚ್ಚುತ್ತಾ ಹೋಯಿತು. ಮನ ಮನೆಯ ದೈವವಾಗಿ ಈ ದೇವಿಯ ದರ್ಶನಕ್ಕಾಗಿ ಮತ್ತು ಜಾತ್ರೆಯಲ್ಲಿ ಪಾದ ಸ್ಪರ್ಷಕ್ಕಾಗಿ ಹೃದಯಪೂರ್ವಕವಾಗಿ ತಮ್ಮ ಶರೀರವನ್ನು ಧರೆಗೆ ಹಾಕಿ ಪಾದ ಸ್ಪರ್ಷ ಮಾಡಿಕೊಂಡು ಪುನೀತರಾಗುತ್ತರೆ.

ಪೂರ್ವದಲ್ಲಿ ಸ್ವಲ್ಪ ಕಡಿಮೆ ಪ್ರಭಾವವಿತ್ತು. ಎನ್ನುವದು ವಕ್ತೃಗಳ ಹೇಳಿಕೆ ಹೊಳೆಯಿಂದ ಬರುವಾಗ ಅರ್ಚಕರಿಗೆ ಬಟ್ಟೆ ಹಾಕುತ್ತಿದ್ದರು. ನಂತರದ ದಿನಗಳಲ್ಲಿ ಹೊಳೆಯಿಂದ ಕುಂಭ ಹೊತ್ತು ಬರುವ ದಾರಿಯಲ್ಲಿ ಸ್ವಲ್ಪವು ಜಾಗವಿರಲಿಲ್ಲ. ಒಬ್ಬರ ಮೇಲೊಬ್ಬರು ಮಲಗಿಕೊಂಡು ಪಾದ ಸ್ಪರ್ಶಕ್ಕೆ ತವಕದಿಂದ ಕಾತುರರಾಗಿ ಭಕ್ತಿಯಿಂದ ಅರ್ಚಕ ಪಾದ ಸ್ಪರ್ಶವಾದರೆ ಬಂದ ಪಾಪ ಕರ್ಮಗಳು ಕೋರ್ಟು, ಕಚೇರಿ ವ್ಯಾಜ್ಯಗಳು ಇಂತಹ ಹತ್ತು ಹಲವು ಸಮಸ್ಯೆಗಳಿಗೆ ಮೊರೆ ಹೋಗಿ (ಅರೆಬತ್ತಲೆ ಸೇವೆ) ಮಾಡಿದರೆ ಪರಿಹಾರವಾಗುತ್ತದೆ. ಎನ್ನುವುದು ಅನುಭವದ ಮೂಲ ಕಂಡುಕೊಂಡ ಬುಡಕಟ್ಟು ವರ್ಗದ ಜನ ಮತ್ತು ಇನ್ನಿತರ ಮೇಲ್ ವರ್ಗದವರು ಕೂಡಾ ಇದೇ ನಂಬಿಕೆಯನ್ನು ಅನುಸರಿಸಿದರು.

ಇದನ್ನು ನೋಡಿ ಒಂದು ಕ್ಷಣ ದಿಗ್‌ಮೂಢನಾದೇ? ಏಕೆ ಗೊತ್ತಾ? ಇವರ ಮೌಢ್ಯತೆಯೇ ಅಥವಾ ದೈವತ್ವದ ಪರಿಕಲ್ಪನೆಯ ಭಾವನೆಯೇ? ಎನ್ನುವುದು ನನಗೆ ಒಂದು ಪ್ರಶ್ನೆಯಾಗಿದೆ. ಇಂದಿನ ಆಧುನಿಕ ಜಗತ್ತಿನಲ್ಲಿ ಮೌಢ್ಯತೆ ಇನ್ನೂ ಗ್ರಾಮೀಣ ಭಾಗದ ಜನರಲ್ಲಿ ಇದೆ ಎನ್ನವುದು ಹಾಗಾಗಿ "ಭಯದಿಂದ ಭಕ್ತಿ ಹುಟ್ಟುತ್ತದೆ." ದೇವಿಯ ದೃಷ್ಟಿ ನಮ್ಮ ಮೇಲೆ ಬಿದ್ದರೇ ನಾವು ಬದುಕುವುದಿಲ್ಲ

ಎನ್ನುವುದು ಅಚಲವಾದ ನಂಬಿಕೆ ಇವರದಾಗಿದೆ. ಇಲ್ಲಿ ಮೌಢ್ಯತೆ ಎನ್ನವುದಕ್ಕಿಂತ ಪುರೋಹಿತಶಾಹಿಯ ವರ್ಗ ಅಥವಾ ಅರ್ಚಕರ ವರ್ಗ, ಸಮಾನ್ಯ ವರ್ಗದ ಜನರನ್ನ ದೈವತ್ವದ ನೆಪದ ಮೂಲಕ ತಮ್ಮ ಸುಖದ ಜೀವನ ಕಳೆಯಲು ಬಳಸಿಕೊಳ್ಳುವ ಒಂದು ತಂತ್ರವಾಗಿ ಕಂಡು ಬರುತ್ತದೆ. ಇಲ್ಲಿ "ನಂಬಿಕೆ ಮತ್ತು ದೈವತ್ವ" ಎನ್ನುವ ಪರಿಕಲ್ಪನೆಯು ಮನುಷ್ಯನ ಬದುಕಿನಲ್ಲಿ ಯಾವ ರೀತಿಯಾದರೂ ಮನುಷ್ಯನ ಮಾನಸಿಕ ಸ್ಥಿತಿಯನ್ನು ಬದಲಾಯಿಸುತ್ತದೆ ಎನ್ನಬೇಕು.

ಗ್ರಾಮ ದೇವತೆಗಳು ಗ್ರಾಮೀಣರೂ ಮಾನಸಿಕ ಅಗತ್ಯತೆ ಎನ್ನಬಹುದು ದೇವತೆಯಿಲ್ಲದೇ ಅವರು ಯಾವುದನ್ನು ಆರಂಭಿಸುವುದಿಲ್ಲ. ಬೆಳಗಿನಿಂದ ಸಂಜೆಯವರೆಗೂ ದುಡಿಮೆಯಲ್ಲಿ ಹಾಗೂ ಇನ್ನಿತರೇ ಸಮಯದಲ್ಲಿ ದೇವರ ಕೃಪೆ ಅವರಿಗೆ ಬೇಕು ಅವರ ಎಲ್ಲಾ ಚಿಂತನೆಗಳು, ಕ್ರಿಯೆಗಳು, ಪ್ರಮಾಣಗಳು ದೇವತೆಯ ಸಾಕ್ಷಿಯಲ್ಲಿ ಸಾಗುತ್ತವೆ. ಗ್ರಾಮ ದೇವತೆಗೆ ಸಂಬಂಧಿಸಿದಂತೆ, ಊರಿನ ಎಲ್ಲಾ ಜಾತಿಗಳ ಜನಕ್ಕೂ ಒಂದೊಂದು ಜವಾಬ್ದಾರಿ ಇರುತ್ತದೆ. ಈ ಜವಾಬ್ದಾರಿಯನ್ನು ಸಂಬಂಧಪಟ್ಟವರು ಅನುವಂಶಿಕವಾಗಿ ನಿರ್ವಹಿಸುತ್ತಾ ಬಂದಿರುತ್ತಾರೆ. ಇಡೀ ಗ್ರಾಮದ ಐಕ್ಯತೆ ಸಾಮರಸ್ಯದ ಜೀವಾಳ ಈ ಗ್ರಾಮದ ದೇವತೆಯೇ ಆಗಿರುತ್ತಾಳೆ. ಆದ್ದರಿಂದ ಪರೋಕ್ಷವಾಗಿ ವ್ಯಕ್ತಿಯ ಮತ್ತು ಗ್ರಾಮ ಸಮೂಹದ ಮಾನಸಿಕ ನಿಯಂತ್ರಣ ಈ ದೇವತೆಯಾಗಿದೆ.

(ದೇವಿ ಎಂದು ಕರೆಸಿಕೊಳ್ಳುವ ಸ್ತ್ರೀ ದೇವತೆ ಪ್ರಚಂಡಳೆಂದು, ಅಜೇಯಳೆಂದು, ಮಹಿಮಾನ್ವಿತಳೆಂದು ಹೆಸರಾದವಳು. ಈ ರೀತಿ ಖ್ಯಾತಿಗೊಂಡ ಈ ದೇವತೆ ಆರ್ಯರಿಗಿಂತ ಹಿಂದೆ ಪೂಜಿಸಲ್ಪಡುತ್ತಿದ್ದ ಮಾತೃ ದೇವತೆಗೆ ಆದಿಶಕ್ತಿ, ಸರ್ವಶಕ್ತಿ, ಮಹೇಶ್ವರಿ, ಕಾಳಿ ಕ್ಯಾತ್ಯಾಯನಿ, ಚಂಡಿ, ಅಂಬಾ ಈಶ್ವರಿ ಭಗವತಿ, ದುರ್ಗಿ ಮಹಾದೇವಿ ಮುಂತಾದ ಇನ್ನೂ ಹಲವಾರು ಹೆಸರುಗಳಿವೆ.

"ಹೆಣ್ಣು ಆಗುವುದಕ್ಕಿಂತ ಮಣ್ಣು ಆಗುವುದು ಲೇಸು
ಮಣ್ಣಿನ ಮ್ಯಾಲೇ ಮರವಾಗಿ ಬೆಳೆದರೆ
ಬಂದವರಿಗೆಲ್ಲ ನೆರಳವ್ವ"

ಅವಳ ಅಂತರಂಗ ಸಹಜ ಜೀವನಾನುಭವದ ಅನಿವಾರ್ಯ ಅಭಿವ್ಯಕ್ತಗಳಾಗಿ ಹೊರಹೊಮ್ಮಿದವು. ಪುರುಷ ನಿರ್ಮಿತ ಸಮಾಜದಲ್ಲಿ ದಲಿತಳಾಗಿ ಬದುಕಬೇಕಾಗಿ ಬಂದಾಗ ಅವಳ ಅಭಿವ್ಯಕ್ತಿಗೆ ಬೇರೆ ದಾರಿಯೇ ಇರಲಿಲ್ಲ. ತನ್ನನ್ನು ಸುತ್ತಿದ್ದ ಅಭೇದ ಕೋಟೆಯ ನಡುವೆಯೂ ಅವಳು ಪಟ್ಟ ಪಾಡನ್ನು ಹುಟ್ಟು ಹಾಡಿನ ರೂಪದಲ್ಲಿ ಹಿಡಿದಿಟ್ಟಿದ್ದ ಅತ್ಯಂತ ಸೂಜಿಗದಷ್ಟು ಎಲ್ಲರೂ ತಲೆದೂಗುವ ವಿಷಯವೂ ಹೌದು, ವೇದನೆಯನ್ನು ಅಭಿವ್ಯಕ್ತ ಪಡಿಸುವಲ್ಲಿ ಅವಳ ಈ ಹಾಡು ಪ್ರಧಾನ ಪಾತ್ರ ವಹಿಸುತ್ತದೆ.

"ಆಕಾಸಕ್ಕೆ ಹಗ್ಗ ಒಗೆದು
ಭೂಮಿಗೆ ಕಡಗಲ್ಲು ಹುರಿಮಾಡಿ
ಭೂಲೋಕವೆಲ್ಲಾ ಕಡಿ ಬ್ಯಾಡವ್ವ
ಸಾಕವ್ವ ತಾಯಿ ಮನದಾನ"

ದುರುಗ್ಯಾರು (ದೇವದಾಸಿ) ಆ ದೇವಿ ವಿಕಾರ ರೂಪ ಕಂಡ ಭಕ್ತಳೂ ದೇವಿಯ ಮರೆ ಹೋಗಿ ಭೂಲೋಕದಲ್ಲಿನ ನರ ಮನುಷ್ಯರಿಗೆ ದಯೆ ತೋರುವಂತೆ ದೇವಿಯನ್ನು ಪ್ರಾರ್ಥಿಸುತ್ತಾಳೆ.

"ಆಳುವ ನರಲೋಕ ಬಿಟ್ಟು
ಎರುವ ಸದರು ಬಿಟ್ಟು
ಇಂಗ್ಯಾಕ ಬಂದಿರಿ"

ಶಿವ ಪಾರ್ವತಿಯರು ಭೂದೇವಿಗೆ ಭೂಲೋಕದಲ್ಲಿನ ಪಾಪ ಕರ್ಮಗಳಿಂದ ರಕ್ಷಿಸುವಂತೆ ಆದೇಶಿಸಿದ್ದರೂ ರಕ್ಷಿಸಲು ಸಾದ್ಯವಾಗದೆ ಭಯ ಭೀತಳಾಗಿ ಶಿವನ ಸನ್ನಿಧಿಗೆ ಹೋದಾಗಿನ ಸಂದರ್ಭದ ಈ ಜನಪದ ಗೀತೆ. ದೈವಗಳ ಪರಂಪರೆ ಅನಾದಿ ಕಾಲದಿಂದಲೂ ದೈವಗಳ ಮೊರೆ ಹೋಗಿರುವುದನ್ನು ನಮ್ಮ ಮಹಾ ಕಾವ್ಯಗಳಾದ ರಾಮಾಯಣ, ಮಹಾಭಾರತ, ವೇದಗಳು, ಉಪನಷತ್ತುಗಳು, ಭಗವದ್ಗೀತೆ ಮೊದಲಾದ ಗ್ರಂಥಗಳಲ್ಲಿ ವಾಸ್ತು ಶಿಲ್ಪಗಳನ್ನು, ತಾಳೆಗರಿಗಳನ್ನು, ಚಿತ್ರಕಲೆಗಳನ್ನು ಅವಲೋಕಿಸಿದಾಗ ತಿಳಿದು ಬರುತ್ತದೆ. ದೈವಗಳ ವಿಕಾಸವನ್ನು ಕುರಿತು ವಿವಿಧ ವಿದ್ವಾಂಸರು, ಪಂಡಿತರು, ಪಾಮರರು, ಪಾಶ್ಚಿಮಾತ್ಯ ವಿದ್ವಾಂಸರು ದೈವಗಳ ಮೂಲದ ಬಗ್ಗೆ ತಮ್ಮದೇ ಆದ ವಾದ ವಿವಾದಗಳನ್ನು ಮಂಡಿಸಿದ್ದಾರೆ. ಆದ್ದರಿಂದ ನನ್ನ ಸಂಶೋಧನೆ ಅಧ್ಯಯನದಲ್ಲಿ ಪ್ರಾಚೀನ ಕಾಲದಿಂದ ಹಿಡಿದು ಇಂದಿನ ಆಧುನೀಕತೆಯವರೆಗೆ ದೈವಗಳ ಒಟ್ಟು ಪರಂಪರೆಯನ್ನು ಸೂಕ್ಷ್ಮದೃಷ್ಟಿಯಿಂದ ವಿವೇಚಿಸಿ, ಅಡಕಗೊಳಿಸಲಾಗಿದೆ.

## ೨.೪ ಪೂಜಾ ವಿಧಾನ

### ರಾಸವಾಳ

೧. ದುರುಗ್ಯೆಯರು ಊಟ ಭಕ್ತರು ತಂದ ಹಣ್ಣು, ಹಾಲು ತುಪ್ಪ ಮೊದಲಾದ ಮೃಷ್ಟಾನ್ನವನ್ನು ದೊಡ್ಡ ಪಾತ್ರೆಯಲ್ಲಿ ಹಾಕುವರು ಹೊಲೆಯರಲ್ಲಿರುವ ದುರುಗಿಯರು ಊಟ ಮಾಡುವ ವಿಧಿ.

೨. ದೇವಿಯನ್ನು ಹೊತ್ತು ಬರುವ ಹರಿಜನ ಪೂಜಾರಿಯು ಹಾದಿಯಲ್ಲಿ ಎಲ್ಲಾ ಜಾತಿಯ ಬೇಡಿಕೊಂಡ ಭಕ್ತರು ಮಲಗಿಕೊಂಡಿರುತ್ತಾರೆ. ಅವರನ್ನು ತುಳಿಯುತ್ತಾ ಹರಿಜನ ಪೂಜಾರಿ ಬರುವನು. ಇದು ಮುತ್ತುಗಳನ್ನು ಕಟ್ಟಿಕೊಂಡ ಲೇಸಿಯರೇ (ದೇವದಾಸೀಯರು) ದುರುಗಿಯ ಹಬ್ಬದ ದಿನ ಗುಡಿ ಒಳಗೆ ನೆಲದ ಮೇಲೆಯೇ ಅನ್ನ, ಹಾಲು, ಹೋಳಿಗೆ, ತುಪ್ಪ ಮೊದಲಾದ ಒಂಭತ್ತು ತರಹದ ಖಾದ್ಯಗಳನ್ನು ರಾಶಿ ಮಾಡಿ ನಿರ್ದಿಷ್ಟ ಸಂಖ್ಯೆಯ ೭, ೯, ೧೧. ಹೀಗೆ ದುರುಗಿಯರಿಗೆ ಊಟ ಮಾಡಲು ಬಿಡುವರು. ಇವರು ಊಟ ಮಾಡಿ ಉಳಿದ ಪ್ರಸಾದವನ್ನು ಬೇರೆ ಯಾರಾದರೂ ಊಟ ಮಾಡಬಹುದು. ಆದರೂ ಉಳಿದರೇ ಅದನ್ನು ನೆಲದಲ್ಲಿ ಉಗಿಯುವರು. ದುರುಗಿಯರು ಊಟ ಮಾಡದೇ ಬೇರೆಯವರು ಊಟ ಮಾಡುವಂತಿಲ್ಲ. ಸಾಮೂಹಿಕ ಭೋಜನ ಬುಡಕಟ್ಟು ಆರ್ಥಿಕತೆಯ ಲಕ್ಷಣದಂತಿದೆ. ಅನೇಕ ಜಾತ್ರೆಗಳಲ್ಲಿ ಜಾತಿಯನ್ನು ಮೀರಿ ಜನ ಸಾಮೂಹಿಕ ಭೋಜನದಲ್ಲಿ

ಒಂದಾಗುತ್ತಾರೆ. ಬಲಿ ಕೊಟ್ಟಾಗ ಪ್ರಾಣಿ ಮಾಂಸವನ್ನು ಪಾಲು ಹಾಕಿಕೊಂಡು ಹಂಚಿಕೊಳ್ಳುವುದು ಇದನ್ನೇ ಪಳಯುಳಿಕೆ ಎನ್ನಬಹುದು. ಅಸ್ಪೃಶ್ಯರು ಕುಲದ ಪೂಜಾರಿಯಿಂದ ಉಳಿದೆಲ್ಲಾ ಜಾತಿಯ ಜನ ತುಳಿಸಿಕೊಳ್ಳುವುದು, ಇವೆಲ್ಲಾ ದಲಿತರ ಒಂದು ಕಾಲದ ಸರ್ವ ಶ್ರೇಷ್ಠತ್ವಕ್ಕೆ ಸಾಕ್ಷಿಯಾಗಿದೆ. ಬ್ರಾಹ್ಮಣರು ಆ ಸ್ಥಾನವನ್ನು ಕಿತ್ತುಕೊಳ್ಳುವವರೆಗೂ ದಲಿತರೇ ಶ್ರೇಷ್ಠರೆಂದು ಪರಿಗಣಿಸಲ್ಪಡುತ್ತಿದ್ದ ಸ್ಥಿತಿಯಿತ್ತು.

**೨.೫. ದೇವಿಯ ಆರಾಧಕರು**

ಪ್ರಾದೇಶಿಕವಾಗಿ ಮೂರು ಸಮುದಾಯದವರು ದೇವಿಯನ್ನು ಆರಾಧಿಸುತ್ತಾರೆ. ಈ ಮೂರು ಬುಡಕಟ್ಟು ವರ್ಗದವರು ಪೂಜಿಸುವ ವಿಧಿ ವಿಧಾನದಂತೆ ಭಿನ್ನತೆಯು ಕಂಡುಬರುತ್ತದೆ. ಹಾಗೇಯೆ ವರ ಪಡೆದುಕೊಳ್ಳುವುದರಲ್ಲಿ ಭಿನ್ನತೆ ಕಾಣುತ್ತೇವೆ. "ಜರ್ಮಲಿ ಪಾಳೆಗಾರರಲ್ಲಿ ಪ್ರಸಿದ್ದ ದೊರೆ ಓಬಣ್ಣ ನಾಯಕನೆಂದು ತಿಳಿದುಬರುತ್ತದೆ. ಅವನ ಕಾಲದಲ್ಲಿ ಚಿತ್ರದುರ್ಗದ ಪಾಳೆಗಾರ (ಮದಕರಿನಾಯಕ) ವಿವಾಹದ ಸಂಬಂಧಗಳು ಏರ್ಪಟ್ಟಿದ್ದವು. ಅಲ್ಲದೇ ಹರಪನಹಳ್ಳಿ ಪಾಳೆಗಾರ ದಾದಯ್ಯ ನಾಯಕ ಮೊದಲನೇಯ ಹೆಂಡತಿ ಹೊನ್ನನಾಯಕಿ ಸತ್ತಾಗ ಜರ್ಮಲಿ ಪಾಳೆಗಾರನ ಮಗಳು ಚಂಪಾನಾಗತಿಯನ್ನು ಮದುವೆಯಾದನೆಂದು ತಿಳಿದುಬರುತ್ತದೆ.

ದಾದಯ್ಯನಾಯಕನ ಆಡಳಿತ ಕ್ರಿ. ಶ. ೧೫೬೫–೧೫೯೨ರಲ್ಲಿ ಬರುವುದರಿಂದ ಈ ಅವಧಿಯಲ್ಲಿ ಕೊಟ್ಟೂರಿನ ಬೆಳ್ಳಿ ಮರಡಿ ದುರುಗಮ್ಮ ಜರ್ಮಲಿ ಪಾಳೆಗಾರರು ಪರವೇ ತನ್ನ ಗಂಡನ ಸಂಗಡ ಯುದ್ದದಲ್ಲಿ ಮಡಿದಿದ್ದಾಳೆ. ದುರುಗಮ್ಮ ಯುದ್ದದಲ್ಲಿ ವೀರಾವೇಶದಿಂದ ಹೋರಾಡಿ ಸಂಸ್ಥಾನ ರಕ್ಷಿಸಿದ್ದಾಳೆ. ಹೀಗೆ ಪಾಳೆಯಗಾರರು ಇವಳೇ ಶಕ್ತಿ ದೇವತೆಯಂತೆ ಪೂಜಿಸುತ್ತಿರುವುದನ್ನು ನೋಡಿದರೇ ಸಂಸ್ಥಾನದ ಪಾಳೆಗಾರರಲ್ಲಿ ಇರುವ ದೈವ ಭಾವನೆ ಪ್ರಶ್ನಾತೀತವಾದದ್ದು, ಈ ಕಾರಣದಿಂದ ಈಕೆಯನ್ನು ಜರ್ಮಲಿ "ದಂಡಿನ ದುರುಗಮ್ಮ" ಎಂದು ಕರೆಯುತ್ತಾರೆ"[1]

"ಇಂದಿನ ಗದಗ ಜಿಲ್ಲೆಯ ಬೆಟಗೇರಿಯಿಂದ ಸುಮಾರು ಮೂರು ಕಿ.ಮೀ. ದೂರದಲ್ಲಿ "ದಂಡಿನ ದುರುಗಮ್ಮನ" ದೇವಸ್ಥಾನವಿದೆ. ಇದರ ಜಾತ್ರೆ ಮೂರು ವರ್ಷಕ್ಕೊಂದು ಸಾರಿ ಜರುಗುತ್ತದೆ." ಈ ದಂಡಿನ ದುರುಗಮ್ಮನ ಎರಡು ಶತಮಾನಗಳ ಇತಿಹಾಸವಿದೆ. ಹಿಂದೂಳಿದ ವರ್ಗಕ್ಕೆ ಸೇರಿದ ಹರಣ – ಶಿಕಾರಿ ಜನಾಂಗದವರು ಈ ದಂಡಿನ ದುರುಗಮ್ಮನ ಭಕ್ತರು ಕಳ್ಳತನ ದರೋಡೆ, ಮತ್ತಿತರ ಅಪರಾಧ ಚಟುವಟಿಕೆಗಳನ್ನು ನಿರಂತರವಾಗಿ ಮಾಡುತ್ತಾ ಬಂದಿರುವವರು. ಈ ಜನಾಂಗದಲ್ಲಿ ಅನೇಕ ದಶಕಗಳಿಂದ ಒಂದು ಬಲವಾದ ನಂಬಿಕೆಯಿದೆ. ದಂಡಿನ ದುರ್ಗಾದೇವಿಯ ಜಾತ್ರೆಯಲ್ಲಿ ಪಾಲ್ಗೊಂಡು ದೇವಿಗೆ ಪ್ರಾಣಿ ಬಲಿ ನೀಡಿ ನೈವೇದ್ಯ ಮಾಡಿ ಪೂಜೆ ಸಲ್ಲಿಸಿದರೆ ಕೈಹಾಕಿದ ಎಲ್ಲಾ ಕಾರ್ಯಗಳಲ್ಲಿಯೂ ಶ್ರೇಯಸ್ಸು ನಮ್ಮದಾಗುತ್ತದೆ. ಎಂಬುವದು ಇವರ ನಂಬಿಕೆ. ಹೀಗೆ ಪಾಳೆಯಗಾರರು ಇವಳೇ ಶಕ್ತಿ ದೇವತೆಯಂತೆ ಪೂಜಿಸುತ್ತಿರುವುದನ್ನು ನೋಡಿದರೇ ಸಂಸ್ಥಾನದ ಪಾಳೆಗಾರರಲ್ಲಿ ಇರುವ ದೈವ ಭಾವನೆ ಪ್ರಶ್ನಾತೀತವಾದದ್ದು, ಈ ಕಾರಣದಿಂದ ಈಕೆಯನ್ನು ಜರ್ಮಲಿ "ದಂಡಿನ ದುರುಗಮ್ಮ" ಎಂದು ಕರೆಯುತ್ತಾರೆ.

ಈ ಜಾತ್ರೆಯಲ್ಲಿ ದೂರದ ಮುಂಬೈ, ದೆಹಲಿ, ಚೆನ್ನೈ, ಅಹ್ಮದಾಬಾದ್, ಮಧುರೈ, ಪುಣೆ, ಮುಂತಾದ ಪ್ರದೇಶಗಳಿಂದ ಭಕ್ತರು ಬಂದು ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ದೇಶದಲ್ಲಿ ಹರಣಿ ಶಿಖಾರಿ ಜನಾಂಗಕ್ಕೆ ಸೇರಿದ ಜನತೆ ತಮ್ಮ ಯಾವುದೇ ಕೆಲಸವಿದ್ದರೂ ಸಹ ಅದನ್ನು ಬದಿಗೊತ್ತಿ, ಕುಟುಂಬ ಸಮೇತರಾಗಿ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ"[೨]

(ಅರಸಿಕೇರೆ ದಂಡಿನ ದುರುಗಮ್ಮನ ಕೊಡ ವಕ್ತ್ರ ಮತ್ತು ಜನಪದ ಹಾಡುಗಳ ಮೂಲಕ ತಿಳಿದು ಬರುತ್ತದೆ. ಪ್ರಾಣಿ ಮತ್ತು ಮನುಷ್ಯ ವಿಪತ್ತಿನಿಂದ ಪಾರು ಮಾಡುವ ದೈವ ಎನ್ನುವುದು ಈ ಭಾಗದ ಜನರ ನಂಬಿಕೆಯಾಗಿದೆ) ಭಾರತ ದೇಶವು ಗ್ರಾಮೀಣ ಪ್ರದೇಶಗಳಿಂದ ಕೂಡಿದ ಮತ್ತು ಧಾರ್ಮಿಕವಾಗಿ ನಂಬಿಕೆಯುಳ್ಳ ಪ್ರದೇಶವೆನ್ನುವದು ಖಚಿತವಾಗಿ ಹೇಳಬಹುದು. ದೈವತ್ವದ ಪರಿಕಲ್ಪನೆಯು ಅವರ ಬದುಕಿನ ಅಗೋಚರವಾದ ಶಕ್ತಿ ಮತ್ತು ಅದ್ಭುತ ಸೃಷ್ಟಿ ಎನ್ನುವ ಅಂಶವನ್ನು ಮನಗಾಣ ಬೇಕಾದರೆ, ಕಾಲದಲ್ಲಿ ಗರ್ಭಿಸಿಕೊಂಡಿರುವ ದಿನಮಾನವನ್ನು ನೋಡಿದರೇ ಗೋಚರವಾಗುತ್ತದೆ. ಜನಪದರ ದೃಷ್ಟಿಯಲ್ಲಿ ದೈವತ್ವ ಎನ್ನುವುದು 'ಸಾಗರದಲ್ಲಿ ಸಾಗುವ ದೋಣಿಗೆ ಹರಿಗೋಲು' ಎಷ್ಟು ಮುಖ್ಯವೋ ದೈವತ್ವದ ಕಲ್ಪನೆ ಜನಪದರ ಬದುಕಿನಲ್ಲಿ ದೈವತ್ವದ ಪರಿಕಲ್ಪನೆಯು ಅಷ್ಟೆ ಮುಖ್ಯ.

ಈ ಹಿನ್ನೆಲೆಯಲ್ಲಿ ವಿವೇಚಿಸುವುದಾದರೆ ಸಮಾಜ ಮೇಲ್ ವರ್ಗದ ಪುರುಷ ದೈವ ಮತ್ತು ಶಿಷ್ಟ ದೈವದ ಮೋರೆ ಹೋಗುತ್ತಾರೆ. ಏಕೆ ಎನ್ನುವ ಪ್ರಶ್ನೆ ನನ್ನದು ಪ್ರಾಚೀನ ಕಾಲವನ್ನು ಅವಲೋಕಿಸಿದಾಗ ಆರ್ಯರು ಮತ್ತು ಆರ್ಯರೇತರರು (ದ್ರಾವಿಡರು) ಮಾತೃ ಪ್ರಧಾನ ಸೃಷ್ಟಿ ದ್ರಾವಿಡರದ್ದಾದರೆ, ಆರ್ಯರದು ಪಿತೃ ಪ್ರಧಾನ ಸಮಾಜ ವ್ಯವಸ್ಥೆಯಾಗಿತ್ತು. ಕೈತೋಟ ಮಾಡುವ ಮೂಲಕ ಕೃಷಿಯನ್ನು ಮೊದಲು ಕಂಡು ಕೊಂಡವಳು ಸ್ತ್ರೀಯಾಗಿದ್ದಾಳೆ. ಭೂಮಿಯು ಸೃಷ್ಟಿ ಶಕ್ತಿಯನ್ನು ಹೊಂದಿದ್ದರೆ, ಹೆಣ್ಣು ಸೃಷ್ಟಿಯ ಶಕ್ತಿಯನ್ನೇ ಹೊಂದಿದೆ. ಈ ಪರಿಕಲ್ಪನೆ ಮೂಲಕ ಹೆಚ್ಚಾಗಿ ಸ್ತ್ರೀ ದೈವತ್ವದ ಮೊರೆ ಹೋಗುತ್ತಾರೆ.

ವಿಜಯನಗರ ಸಾಮ್ರಾಜ್ಯ ಪತನಾನಂತರ ಕರ್ನಾಟಕದಲ್ಲಿ ಅನೇಕ ಮನೆತನಗಳು ಅಸ್ತಿತ್ವಕ್ಕೆ ಬಂದವು. ಈ ಪಾಳೆಗಾರರನ್ನು ನಾಯಕರೆಂದು ಕರೆದರೆ ಅವರಲ್ಲಿ ಜರ್ಮಲಿ ಪಾಳೆಗಾರರು ಪ್ರಮುಖರು. ಕೆಲವು ಮೂಲಗಳ ಪ್ರಕಾರ ಪಾಪಣ್ಣ ನಾಯಕ ಜರ್ಮಲಿ ಸಂಸ್ಥಾನ ಸ್ಥಾಪಕನೆಂದು ತಜ್ಞರು ಅಭಿಪ್ರಾಯಪಡುತ್ತಾರೆ. "ದೇವನೊಬ್ಬ ನಾಮಹಲವು" ಎಂಬ ಉಲ್ಲೇಖದನ್ವಯ ಪ್ರಾದೇಶಿಕ ಭಿನ್ನತೆ ಯಾವ ರೀತಿಯಲ್ಲಿ ಇರುತ್ತದೆ, ಎನ್ನುವುದು ವಿಶ್ಲೇಷಣೆ ಮಾಡಬೇಕಾಗಿದೆ. ಈ ಮೂರು ಪ್ರಾದೇಶಿಕ ಭಿನ್ನತೆ ಯಾವ ರೀತಿಯಲ್ಲಿ ಇರುತ್ತದೆ ಎನ್ನವುದು ವಿಶ್ಲೇಷಣೆ ಮಾಡಬೇಕಾಗಿದೆ. ಈ ಮೂರು ಪ್ರಾದೇಶಿಕ ಭಾಗಗಳ ಒಂದೇ ನಾಮದ ಸ್ತ್ರೀ ದೈವವನ್ನು ನೋಡುವುದಾದರೇ ಇಲ್ಲಿ ಭಿನ್ನತೆ ಕಂಡುಬರುತ್ತದೆ. ಆದರೆ ಮೂರು ವರ್ಗಗಳು ಬುಡಕಟ್ಟು ವರ್ಗಗಳೇ ಎನ್ನುವ ಅಂಶವನ್ನು ನಾವು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಧಾರ್ಮಿಕವಾಗಿ ಮನುಷ್ಯನ ಮನಸ್ಥಿತಿ ಯಾವ ರೀತಿ ಸ್ಥಿತ್ಯಂತರಿಸುತ್ತದೆ ಎನ್ನುವುದೇ ಒಂದು ಪರಿಕಲ್ಪನೆ.

ಒಂದೇ ನಾಮಧಾರಿತ ದೈವವನ್ನು ಯಾವ ರೀತಿಯಲ್ಲಾದರೂ ವಿಶ್ಲೇಷಿಸಬಹುದು ಎನ್ನುವುದಕ್ಕೆ "ಮನಸ್ಸಿನಂತೆ ಮಹಾದೇವ" ಮನಸ್ಸಿದ್ದರೇ ಮಾರ್ಗ ಎನ್ನುವ ಉಲ್ಲೇಖದಂತೆ ಜರ್ಮಲಿ ಪಾಳೆಗಾರರು ಬಳಸಿಕೊಂಡು ಶತ್ರುಗಳು ಯುದ್ದಕ್ಕೆ ಬಂದಾಗ ಈ ದೈವದ ಸ್ಮರಣೆಯಿಂದ ಶತೃಗಳ ದಮನ ಮಾಡಲಿಕ್ಕೆ ಪ್ರೇರಣೆಯಾಗಿ ನಿಲ್ಲುವಳು. ಬೆಟಗೇರಿ, ಹರಿಣಿ ಶಿಕಾರಿ ಜನಾಂಗದವರ ನಂಬಿಕೆ. ಈ ದೈವ ಶಕ್ತಿಯಿಂದ ಅಥವಾ ಪ್ರೇರಣೆಯಿಂದ ಕೈ ಹಾಕಿದ ಕೆಲಸ ಶ್ರೇಯಸ್ಸು, ಹಾಗೇಯೆ ಅರಸಿಕೇರಿ ದಂಡಿನ ದುರುಗಮ್ಮನು ಈ ಭಾಗದಲ್ಲಿ ಪಶು ಮತ್ತು ಪ್ರಾಣಿಗಳು ಮತ್ತು ಮನುಷ್ಯರಿಗೆ ರೋಗ ರುಜನಿಗಳು, ಕಷ್ಟ-ಕಾರ್ಪಣ್ಯಗಳು ಬಂದರೆ ರಾಜರುಗಳು ಅಥವಾ ನಾಯಕರುಗಳು ಶತ್ರುಗಳ ಬೀತಿಯಿಂದ ದೇವಿಗೆ ಮೊರೆ ಹೋದರೆ ವಿಪತ್ತಿನಿಂದ ಪರಿಹಾರವಾಗುತ್ತದೆ. ಎನ್ನುವ ಪರಿಕಲ್ಪನೆ ಇವರದಾಗಿತ್ತು. ಇಲ್ಲಿ ದೇವದಾಸಿಯು ಹಾಡುವ ಜನಪದ ಗೀತೆಯನ್ನು ನೋಡಿದರೆ ಹೀಗೆ ಕ್ರಮವಾಗಿ ಧಾರ್ಮಿಕ ಕಲ್ಪನೆಗಳು ಅನೇಕ ಪರಿಸರದಲ್ಲಿ ಬೆಳೆದುಕೊಂಡು ಬಂದು ಮುಂದೆ ಧರ್ಮದ ಉಗಮಕ್ಕೆ ದಾರಿ ಮಾಡಿದವು. ಇಂತಹ ಧಾರ್ಮಿಕ ಕಲ್ಪನೆಯ ಪ್ರಭಾವದಲ್ಲಿ ಸಿಲುಕಿದ ಮಾನವನಿಗೆ ಹೊಸ ಕಲ್ಪನೆ ಮೂಡಿ ಮುಂದೆ ಅವನು ಮೂರ್ತಿ ಪೂಜೆಯನ್ನು ರೂಢಿಯಲ್ಲಿ ತಂದನು. ತನ್ನ ಕಲ್ಪನೆಗೆ ತೋಚಿದಂತೆ ಮೂರ್ತಿಯನ್ನು ಸೃಷ್ಟಿಸಿಕೊಂಡನು. ಅದರ ಮೇಲೆ ದೇವತಾ ಭಾವನೆಯನ್ನು ಮೂಡಿಸಿ ಆರಾಧಿಸತೊಡಗಿದನು. ಜ್ಞಾನ ಕ್ಷಿತಿಜವು ವಿಸ್ತಾರವಾದಂತೆ, ಮೂರ್ತಿ ಶಿಲ್ಪಗಳ ಜೊತೆಗೆ ದೇವಾಲಯ ನಿರ್ಮಾಣದ ಕಲ್ಪನೆಗಳು ಬಂದವು ಹೀಗೆ ಧಾರ್ಮಿಕ ಭಾವನೆಯು ಗಟ್ಟಿಗೊಂಡಂತೆ ಅದರೊಳಗೆ ಕಲೆಯು ಬೆಳೆಯುತ್ತಾ ಸಾಗಿತು. ಹೀಗೆ ಕಾಲ ಕ್ರಮೇಣ ಮಾನವನಲ್ಲಿ ಉಂಟಾದ ಭಾವನೆಗಳ ಬೆಳವಣಿಗೆ ಆಯಾ ಪರಿಸರಕ್ಕೆ ಅನುಗುಣವಾಗಿ ಹಲವಾರು ದೇವತೆಗಳ ಉಗಮಕ್ಕೆ, ಪ್ರಕೃತಿಯಲ್ಲಿ ನಡೆಯುವ ಎಲ್ಲಾ ಘಟನೆಗಳಿಗೆ ಯಾವುದೋ ಒಂದು ಅವ್ಯಕ್ತ ಶಕ್ತಿ ಕಾರಣವಿರಬೇಕೆಂದು ನಂಬಿದ. ಮನುಷ್ಯ ಆ ಶಕ್ತಿಯನ್ನೇ ದೈವವೆಂದು ತಿಳಿದು ಪೂಜಿಸತೊಡಗಿದನು. ಹೀಗೆ ವ್ಯಕ್ತಿಯಿಂದ ವ್ಯಕ್ತಿಗೆ ಸಮುದಾಯದಿಂದ ಸಮುದಾಯಕ್ಕೆ ದೈವಗಳ ಗ್ರಹಿಕೆಯಲ್ಲಿ ಭಿನ್ನತೆ ಕಾಣಿಸಿದ್ದರಿಂದ ಬಿನ್ನ, ಬಿನ್ನ ಹೆಸರಿನ ದೈವಗಳು ಹುಟ್ಟಲು ಕಾರಣವಾಗಿದೆ.

ದ್ರಾವಿಡ ಸಂಸ್ಕೃತಿಯಲ್ಲಿ ಸ್ತ್ರೀ ದೈವಿಗಳೇ ಪ್ರಧಾನವಾದರೆ ಆರ್ಯ ಸಂಸ್ಕೃತಿಯಲ್ಲಿ ಪುರುಷ ದೈವಗಳೇ ಪ್ರಧಾನವಾಗಿವೆ. ಭಾರತಕ್ಕೆ ಬಂದು ನೆಲೆಸಿರುವ ಇತರೆ ಸಮುದಾಯಗಳಲ್ಲಿ ಕೂಡಾ ಪುರುಷ ದೈವಗಳೆಂದು ಪ್ರಧಾನವಾಗಿದೆ. ಮನುಷ್ಯನ ಭಕ್ತಿಯಿಂದ ಕೆಲವು ದೈವಗಳು ಹುಟ್ಟಿದರೆ ಆತನ ಮೂಢ ನಂಬಿಕೆ ಹಾಗೂ ಅಂಧ ಸಂಪ್ರದಾಯಗಳು ಕೆಲವು ದೈವಗಳು ಹುಟ್ಟಿಕೊಂಡಿವೆ.

ಅರ್ನಸ್ಟ ಹೆಕೆಲ್‌ರವರು ಹೇಳಿರುವಂತೆ ಧಾರ್ಮಿಕ ನಂಬಿಕೆ ಯಾವಾಗಲೂ ಅದ್ಭುತಗಳೊಂದಿಗೆ ಹೊಂದಿಕೆಯುಳ್ಳದ್ದಾಗಿರುತ್ತದೆ. ಆದ್ದರಿಂದ ದೇವರ ಕಲ್ಪನೆ ಪ್ರಕೃತಿ ವಿರೋದಿ ಹಾಗೂ ಅಲೌಕಿಕದೊಂದಿಗೆ ಹೊಂದಾಣಿಕೆಯುಳ್ಳದ್ದಾಗಿರುತ್ತದೆ. ಧರ್ಮ ಮತ್ತು ಮೂಢನಂಬಿಕೆ ಪ್ರಕೃತಿ ನಿಯಮಗಳನ್ನು ವಿರೋಧಿಸಿ, ಬದುಕಲಿಚ್ಛಿಸುತ್ತವೆ ಆದ್ದರಿಂದ ಅವು ವಿಚಾರಹೀನವಾಗಿವೆ. (ಪಖರದ ೧೯೫೪) ಹೀಗೆ ದೈವಗಳ ಪರಿಕಲ್ಪನೆಗೆ ಸಂಬಂಧಿಸಿದಂತೆ ಬೇರೆ ಬೇರೆ ಅಭಿಪ್ರಾಯಗಳನ್ನು ಕಾಣಬಹುದು.

ಜನಪದ ದೈವಗಳು ದ್ರಾವಿಡ ಸಂಸ್ಕೃತಿಯ ಪ್ರತೀಕವಾಗಿದ್ದರೆ ಶಿಷ್ಟ ದೈವಗಳು ಆರ್ಯ ಸಂಸ್ಕೃತಿ ಪ್ರತಿಬಿಂಬವಾಗಿದೆ. ದ್ರಾವಿಡ ಸಂಸ್ಕೃತಿಯ ಮೇಲೆ ಆರ್ಯ ಸಂಸ್ಕೃತಿಯ ಪ್ರಭಾವ ಆಗುತ್ತಲೇ ಬಂದಿವೆ. ಹಾಗೆಯೇ ಜನಪದ ದೈವಗಳ ಪ್ರಭಾವ ಶಿಷ್ಟ ದೈವಗಳ ಮೇಲೆ ಮತ್ತು ಶಿಷ್ಟ ದೈವಗಳ ಪ್ರಭಾವ ಜನಪದ ದೈವಗಳ ಮೇಲೆ ಉಂಟಾಗಿದೆ. ಇವುಗಳು ಸಂಸ್ಕೃತಿ ಸಂಸ್ಕೃತಿಗಳ ನಡುವೆ ನಡೆಯುವ ಸಂಘರ್ಷ ಕಾರಣವಾಗಿರಬಹುದು.

ಮಾನವನು ತನಗೆ ಇಷ್ಟ ಬಂದಂತೆ ದೇವತೆಗಳನ್ನು ಸೃಷ್ಟಿಸಿಕೊಂಡನೆಂದು ಹೇಳಬಹುದು. ದೇವತೆಗಳು ಉಗಮವಾದ ನಂತರ ಅವನ ಮನಸ್ಸಿನಲ್ಲಿ ಪೂಜಾ ವಿಧಿ-ವಿಧಾನಗಳ ಕಲ್ಪನೆಗಳು ಮೂಡಿದವು. ಹೀಗೆ ದೇವರನ್ನು ಸೃಷ್ಟಿಸಿದ ಮನುಷ್ಯ ತಾನೂ ಸೃಷ್ಟಿಸಿದ ದೇವತೆಗಳಿಗೆ ಮಾನವನ ಗುಣ ಸ್ವಭಾವ ಮನೋಧರ್ಮಗಳನ್ನು ಆರೋಪಿಸಿದೆ. ಅದರ ಪರಿಣಾಮವಾಗಿ ನೀನು ನನ್ನನ್ನು ಉದ್ಧಾರ ಮಾಡಿದರೆ ನಾನು ನಿನಗೆ ಪ್ರತಿಯಾಗಿ ಬಲಿರೂಪದಲ್ಲಿ ಅಥವಾ ಇನ್ನಾವುದೋ ರೂಪದಲ್ಲಿ ಕಾಣಿಕೆ ಅರ್ಪಿಸುವೆನು. ಅದರ ಪ್ರಯೋಜನ ದೃಷ್ಟಿಯಿಂದ ಪ್ರಾರ್ಥಿಸಿಕೊಂಡಿರಬೇಕು.

ಹೀಗೆ ಪ್ರಾರ್ಥನಾ ಪೂಜೆಯಿಂದ ತಕ್ಕ ಫಲ ದೇವರಿಂದ ದೊರೆಯುತ್ತದೆ. ಎಂಬ ಗಾಢನಂಬಿಕೆ ಮೂಡಿಕೊಂಡು ಬಂದಿತು. ಮಾನವನ ಸಾಂಘಿಕ ಜೀವನದ ಫಲವಾಗಿ ಕ್ರಮೇಣ ಒಂದೊಂದು ಗುಂಪುಗಳೇ ಒಂದೊಂದು ಬುಡಕಟ್ಟುಗಳಾಗಿ ಪರಿಣಮಿಸಿದವು. ಒಂದೊಂದು ಬುಡಕಟ್ಟಿನ ಜನರಲ್ಲಿ ಒಂದೊಂದು ಬಗೆಯ ನಂಬಿಕೆ ಒಂದೊಂದು ರೀತಿಯ ಪದ್ಧತಿ ಆಚರಣೆಗಳು ಪ್ರತ್ಯೇಕ ಪ್ರತ್ಯೇಕವಾಗಿ ಕಾಣಿಸಿಕೊಳ್ಳಲಾರಂಭಿಸಿದವು. ಸಾಂಘಿಕ ಜೀವನದ ಪರಿಕಲ್ಪನೆಗಳಿಂದಾಗಿ ಅವನ ಮನಸ್ಸು ವಿಶಾಲಗೊಂಡು ವಿಚಾರಶಕ್ತಿ ಇಮ್ಮಡಿಸಿ ವಿಕಾಸಶೀಲ ಮನೋಭಾವ ತೆಳೆಯಿತು. ತತ್ಪರಿಣಾಮವಾಗಿ ಅವನಲ್ಲಿ ವಾಸ್ತುಶಿಲ್ಪದ ಕಲ್ಪನೆಗಳು ಮೂಡಿ ಬಂದವು. ಇದರಲ್ಲಿ ಮನೆಗಳಿರಬಹುದು, ಮಠಗಳಿರಬಹುದು, ಗುಡಿಗುಂಡಾರಗಳಿರಬಹುದು. ಇವುಗಳನ್ನು ಹಂತ ಹಂತವಾಗಿ ಕಾರ್ಯಚರಣೆಯಲ್ಲಿ ತರುತ್ತಾ ಮಾನವನು ಮುಂದುವರೆದನು. ಆಗಿನ ಕಾಲದಲ್ಲಿ ಗುಡಿಗುಂಡಾರಗಳು ಕೇವಲ ಒಂದು ಬುಡಕಟ್ಟಿನವರಿಗೆ ಅನ್ವಯವಾಗಿದೆ. ಇಡೀ ಜನಾಂಗಕ್ಕೆ ಮೂಲವಾಗಿ ಕಂಡು ಬಂದವು.

ಸಮಾಜಶಾಸ್ತ್ರ ದೃಷ್ಟಿಯಿಂದ ಧರ್ಮ ದೇವರು ಎಂಬ ಪರಿಕಲ್ಪನೆಗಳು ಮಾನವನ ಬದುಕಿನ ಅವಿಭಾಜ್ಯ ಅಂಗಗಳಾಗಿವೆ. ಇವು ಸಾಮಾಜಿಕ ಸಂಬಂಧವನ್ನು ಕಲ್ಪಿಸುವುದರ ಜೊತೆಗೆ ದೇವರು ಮತ್ತು ಧರ್ಮದ ಸುತ್ತಾ ಅನೇಕ ಆಚರಣೆಗಳನ್ನು ಹಗೆದವು ಹಬ್ಬ ಹುಣ್ಣಿಮೆ ಜಾತ್ರೆ ಹೀಗೆ ಅನೇಕ ಕಟ್ಟಲೆಗಳು ಮೂಡಿಬಂದವು. ಇದರಿಂದಾಗಿ ಜನರಲ್ಲಿ ಭಕ್ತಿ ಮೊಳಕೆಯು ಉದಯಿಸಿತು. ತಮ್ಮ ಭಕ್ತಿಯ ದಾಹವನ್ನು ಹಿಂಗಿಸಿಕೊಳ್ಳಲು ದೇವಾಲಯಗಳು ನಿರ್ಮಾಣದ ಕಡೆಗೆ ಹೆಚ್ಚು ಗಮನ ಕೊಟ್ಟರು.

ಮಾತೃ ದೇವತಾ ಪಂಥದ ಜನಪದ ರೂಪಗಳೇ ಗ್ರಾಮ ದೇವತೆಗಳು ಭಯ, ಭಕ್ತಿ, ಭೀತಿಯಿಂದ ಹುತ್ತ, ವೃಕ್ಷ, ಶಿಲೆಗಳನ್ನು ಆರಾಧಿಸುತ್ತಿದ್ದ, ಗ್ರಾಮೀಣರ ಒಂದು ಕಾಲ ಘಟ್ಟದಲ್ಲಿ ಅವುಗಳಿಗೆ ಗ್ರಾಮ

ದೇವತೆಗಳನ್ನು ಕಂಡು ಕೊಂಡರು. ತಮ್ಮ ಜೀವನ ಅನುಭವದಿಂದಲೇ ಹುಟ್ಟಿದ ಪುರಾಣ ಕಥೆಗಳನ್ನು ಅವುಗಳಿಗೆ ಜೋಡಿಸಿದರು. "ಅನೇಕ ದೇವತೆಗಳು ಆದಿ ಪ್ರಾಚೀನವಾದ ಭೂಮಿಪೂಜೆ, ಮಾತೃಪೂಜೆ ಕುರುಹುಗಳಲ್ಲದೇ ಬೇರೆ ಬೇರೆ ಅಲ್ಲ. ಕೆಲವೊಮ್ಮೆ ಅವು ಫಲಶಕ್ತಿಯ ಸ್ಪಷ್ಟ ಪ್ರತೀಕಗಳಂತೆ ಕಾಣುತ್ತವೆ. ಅರಣ್ಯವಾಸಿಗಳಾದ ಬುಡಕಟ್ಟು ಜನಾಂಗಗಳು ಪೂಜಿಸುವ ಪ್ರೇತಾತ್ಮಗಳು ಗ್ರಾಮ ಸಮುದಾಯಗಳು ಬೆಳೆದ ಮೇಲೆ ಗ್ರಾಮ ದೇವತೆಗಳಾಗಿ ಮಾರ್ಪಾಟು ಹೊಂದಿರುವ ಸಾಧ್ಯತೆಗಳಿವೆ ಅಥವಾ ಐತಿಹಾಸಿಕ ಕಾಲದಲ್ಲಿ ನಡೆದ ಕೆಲವು ಘಟನೆಗಳನ್ನು ಹಾಗೂ ಆಕಸ್ಮಿಕಗಳನ್ನು ಕೂಡಾ ಇಂತಹ ದೇವತೆಗಳನ್ನು ಸೃಷ್ಟಿಸಿರಬಹುದು.

## ೨.೬. ಸ್ತ್ರೀ ದೈವ ಮತ್ತು ಪುರುಷ ದೈವಗಳು

### ಸ್ತ್ರೀ ದೈವಗಳು

#### ಊರಮ್ಮ

ಈ ದೇವಿಯು ಅರಸಿಕೇರಿ ಗ್ರಾಮ ದೇವತೆಯಾಗಿದ್ದು ಈ ದೇವಿಯ ಪೂಜೆಯು ಪ್ರತಿದಿನವು ಸಾಮಾನ್ಯವಾಗಿ ನಡೆತ್ತದೆ. ಮಂಗಳವಾರ ಮತ್ತು ಶುಕ್ರವಾರಗಳಂದು ವಿಶೇಷ ಪೂಜೆ ನಡೆಯುತ್ತದೆ. ಈ ದೇವಿಯು ಗ್ರಾಮದ ಮೂಲದೇವತೆಯಾಗಿದ್ದು, ಊರಿನ ಎಲ್ಲಾ ಜನರು ಪೂಜಾ ಕಾರ್ಯಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾರೆ.

ಈ ದೇವಿಯ ಕಾರ್ತಿಕೋತ್ಸವವು ಡಿಸೆಂಬರ್ ಕೊನೆಗೆ ಇಲ್ಲವೇ ಜನವರಿ ಮೊದಲ ವಾರದಲ್ಲಿ ದೀಪವನ್ನು ಹಚ್ಚುವುದರ ಮೂಲಕ ಕಾರ್ತಿಕೋತ್ಸವ ಜರುಗುತ್ತದೆ. ಇದರಲ್ಲಿ ಗ್ರಾಮದ ಜನರು ಸಾಮೂಹಿಕವಾಗಿ ಕಾರ್ತಿಕೋತ್ಸವವನ್ನು ಆಚರಿಸುತ್ತಾರೆ. ಆ ದಿನ ದೇವಿ ಪುರಾಣ, ಪ್ರವಚನ ನಡೆಯುತ್ತದೆ.

#### ದೊಡ್ಡ ಹಬ್ಬ

ಈ ಹಬ್ಬವು ಹಿಂದಿನ ಕಾಲದಲ್ಲಿ ಪ್ರತಿ ಐದು ವರ್ಷಕ್ಕೊಮ್ಮೆ ನಡೆಯುತ್ತಿತ್ತು. ಕಾಲವಿಕಾಸವಾದಂತೆ ಈ ಹಬ್ಬವು ಒಂಭತ್ತು ವರ್ಷಕ್ಕೊಮ್ಮೆ ವಿಶೇಷವಾಗಿ ಜರುಗುತ್ತದೆ.

#### ಘಟಿಕ ಪೂಜಾ ವಿಧಾನ

ಈ ಪೂಜೆಯು ದೇವಿಗೆ ವಿಶೇಷ ಆಚರಣೆಯಾಗಿ ಜರುಗುತ್ತದೆ. ಗ್ರಾಮದ ಆಯಗಾರರ ಮನೆಯಲ್ಲಿ ಕೇಲುಗಳನ್ನು ಡೊಳ್ಳು ಹಾಗೂ ಇತರೇ ವಾದ್ಯಗಳ ಮೂಲಕ ದೇವಿಯ ಸನ್ನಿಧಿಗೆ ತಂದು, ಗ್ರಾಮದ ಹಿರಿಯರು ಕೂಡಿಕೊಂಡು ಗೌಡರ ಮನೆಯಲ್ಲಿರುವ ಘಟಿಯನ್ನು ವಾದ್ಯ ಮೇಳಗಳು ದೇವಿಯ ಗುಡಿಗೆ ತರುತ್ತಾರೆ. ನಂತರ ವಾದ್ಯ ಮೇಳಗಳೊಂದಿಗೆ ಗುಡಿಯಿಂದ ಬಣಕಾರ ಮನೆಗೆ ಹೋಗಿ "ಮಳಿಪಚಲಿ"ಯನ್ನು ದೇವಿಯ ಗುಡಿಗೆ ತರುತ್ತಾರೆ. ಇದೇ ರೀತಿಯಲ್ಲಿ ತಳವಾರ

ಮನೆಯಲ್ಲಿರುವ ಘಟಿಯನ್ನು ತರುತ್ತಾರೆ. ತದ ನಂತರ ಹರಿಜನ ಮನೆಯಲ್ಲರುವ ಘಟಿಯನ್ನು ತರುತ್ತಾರೆ. ನಂತರ ಚಲುವಾದಿ ಮನೆಯಲ್ಲಿರುವ ಘಟಿಯನ್ನು ದೇವಿಯ ಗುಡಿಗೆ ತಂದು. ಈ ಗ್ರಾಮದ ಆಯಗಾರರ ಮನೆಯಲ್ಲಿ ಘಟಿಯನ್ನು ಗ್ರಾಮದೇವಿಯ ಗುಡಿಯಲ್ಲಿ ಕೂಡಿಕೊಂಡು. ಅಲ್ಲಿಂದ ವಾದ್ಯ ಮೇಳಗಳೊಂದಿಗೆ ಹೊಳೆಗೆ ಹೋಗಿ ಅಲ್ಲಿ ಪೂಜಾ ಕಾರ್ಯಗಳನ್ನು ನೆರವೇರಿಸಿಕೊಂಡು ನಂತರ ವಾದ್ಯಗಳ ಮೂಲಕ "ಚೌತಿ ಕಟ್ಟೆಗೆ" ತರುತ್ತಾರೆ. ಪೂಜಾ ಕಾರ್ಯದ ನಂತರ ಆಯಗಾರರು ತಂದ ಘಟಿಗಳನ್ನು ತಮ್ಮ ತಮ್ಮ ಮನೆಗಳಿಗೆ ಒಯ್ಯುತ್ತಾರೆ.

ಮಾರನೆಯ ದಿವಸ ಚೌತಿ ಮನೆಗೆ ತಂದು ಅಂದಿನ ದಿವಸ ಬೆಳಿಗ್ಗೆ ಕೋಣನ ಕಡಿದು ೨೧ ಚೀಲ ಜೋಳದ ನುಚ್ಚನ್ನು ಬೇಯಿಸಿ, ಗ್ರಾಮದ ಹೊರಗಡೆ ಚರಗವನ್ನು ಹೊಡೆಯುತ್ತಾರೆ. ಬೇಲಿಯನ್ನು ಹಚ್ಚಿ ಈ ಹಬ್ಬ ಮುಗಿಯುವವರೆಗೂ ಊರಿನ ಹೊರಗೆ ಹೋಗುವಂತಿಲ್ಲ ಎಂಬ ಕಟ್ಟುಪಾಡು ಇದೆ.

ಚರಗವನ್ನು ಚೆಲ್ಲಿದ ನಂತರ ಈ ಹಬ್ಬಕ್ಕೆ ಸಂಬಂದಪಟ್ಟಂತೆ ಚೌತಿ ಮನೆಯ ಮುಂದೆ ಹೂವಿನಹಡಗಲಿಯಿಂದ ಬಂದ ರಾಣಿಗರು, (ಹಾಸ್ಯಗಾರರು) ಹಾಸ್ಯ ಸನ್ನಿವೇಶಗಳನ್ನು ಪ್ರಸ್ತುತ ಪಡಿಸುತ್ತಾರೆ. ತದನಂತರ ಘಟಿ ಹೊತ್ತ ಗ್ರಾಮದ ಎಲ್ಲ ಆಯಗಾರರಿಗೆ ಹೊಸ ಬಟ್ಟೆಗಳನ್ನು ಕೊಡುತ್ತಾರೆ.

**ಪೋತರಾಜರು (ವಾಲ್ಮೀಕಿ ಜನಾಂಗ)**

ಈ ಪೋತುರಾಜರು ಕನಕ ಬಸಾಪುರದಿಂದ ಬರುತ್ತಾರೆ. ಅವರು ಬಂದ ನಂತರ ಈ ಗ್ರಾಮದ ಕುರುಬ ಜನಾಂಗದವರು ಓತುಮರಿಯನ್ನು ಬಚ್ಚಿ ಇಡುತ್ತಾರೆ. ಆಗ ಪೋತುರಾಜ ಕಾಲಿಗೆ ಗಗ್ಗರಿ ಕಟ್ಟಿಕೊಂಡು ವೇಷವನ್ನು ಹಾಕಿಕೊಂಡು ಚಲವಾದಿಯ ವ್ಯಕ್ತಿಗೆ ಮರಿಯನ್ನು ಹುಡುಕುವಂತೆ ಚಾಟೀಲಿ ಹೊಡೆಯುತ್ತಾ ಮರಿಯು ಸಿಕ್ಕ ಮೇಲೆ ಚೌತುಮನೆಗೆ ಓತು ಮರಿಯನ್ನು ತಂದು ಗವು ಜಿಗಿಯುವುದು ನಡೆಯುತ್ತದೆ.

**ಗಂಗಾ ಪರಮೇಶ್ವರಿ**

ಈ ದೇವಿಯ ಪೂಜಾ ಕಾರ್ಯಗಳು ಪ್ರತಿ ದಿನ ನಡೆಯುತ್ತದೆ. ನಂತರ ವಿಶೇಷ ಪೂಜೆ ಮಂಗವಾರ ಮತ್ತು ಶುಕ್ರವಾರಗಳಂದು ನಡೆಯುತ್ತದೆ. ಇದರ ಕಾರ್ತಿಕೋತ್ಸವವು ಡಿಸೆಂಬರ್ ಕೊನೆಯವಾರದಲ್ಲಿ ಅಥವಾ ಜನವರಿ ಮೊದಲ ವಾರದಲ್ಲಿ ನಡೆಯುತ್ತದೆ. ಈ ದೇವಿಯ ಎಲ್ಲಾ ಭಕ್ತರು ಕೂಡಿಕೊಂಡು ದೀಪಗಳನ್ನು ಹಚ್ಚುವುದರ ಮೂಲಕ ಕಾರ್ತಿಕೋತ್ಸವವನ್ನು ಬಹುವಿಜೃಂಭಣೆ ಯಿಂದ ಆಚರಿಸುತ್ತಾರೆ. ಮಾರನೆಯ ದಿನ ಬೆಳಿಗ್ಗೆ ಹೊಳೆಗೆ ಹೋಗುವಾಗ ಕಂಚಿನ ಕೇಲನ್ನು ಪೂಜಾರಿಯು ಹೊತ್ತುಕೊಂಡು ಹೊಳೆಗೆ ಹೋಗುತ್ತಾರೆ. ೧೩ ಜನ ಜೋಗಮ್ಮನವರಿಗೆ ಪಡ್ಡಲಿಗೆ ತುಂಬಿಸಿ ಕಂಚಿನ ಕೇಲನ್ನು ಹೊತ್ತುಕೊಂಡು ಪೂಜೆಯೊಂದಿಗೆ ಡೊಳ್ಳು ಹಲಗೆ ವಾದ್ಯಗಳೊಂದಿಗೆ ಹಾಡುತ್ತಾ, ಕುಣಿಯುತ್ತಾ ಹೊಳೆಗೆ ಹೋಗಿ ಬರುತ್ತಾರೆ. ಶುಕ್ರವಾರ ರಾತ್ರಿ ದೇವಿ ಪುರಾಣ, ಪ್ರವಚನಗಳು ನಡೆಯುವುದು ಇಲ್ಲಿಯ ವಿಶೇಷ.

## ಪುರುಷ ದೈವಗಳು

### ಕಲ್ಲಿಂಗೇಶ್ವರ

ಈ ದೇವರು ಅರಸಿಕೇರಿಯ ಮೂಲ ದೇವರು ಇದರ ಪೂಜೆಯು ಸಾಮಾನ್ಯವಾಗಿ ಪ್ರತಿದಿನ ನಡೆಯುತ್ತದೆ. ಸೋಮವಾರ ಮತ್ತು ಗುರುವಾರಗಳಂದು ವಿಶೇಷ ಪೂಜೆ ನಡೆಯುತ್ತದೆ. ಇದರ ಕಾರ್ತಿಕೋತ್ಸವವು ಡಿಸೆಂಬರ್ ಕೊನೆಗೆ ಇಲ್ಲವೇ ಜನವರಿ ಮೊದಲ ವಾರದಲ್ಲಿ ದೀಪವನ್ನು ಹಚ್ಚುವುದರ ಮೂಲಕ ಕಾರ್ತಿಕೋತ್ಸವ ಜರುಗುತ್ತದೆ. ಇದರಲ್ಲಿ ಗ್ರಾಮದ ಜನರು ಸಾಮೂಹಿಕವಾಗಿ ಕಾರ್ತಿಕೋತ್ಸವವನ್ನು ಆಚರಿಸುತ್ತಾರೆ. ಯುಗಾದಿ ಹಬ್ಬದ ದಿವಸ ವಿಶೇಷ ಪೂಜೆ ನೆರವೇರುತ್ತದೆ. ತದನಂತರ ವಿಜಯದಶಮಿ ದಿವಸದಂದು ವಿಶೇಷ ಪೂಜೆಯು ಇರುತ್ತದೆ. ಮೂರ್ತಿಯ ಒಂದು ಭಾಗ ಹರಿಮುಖ ಇನ್ನೊಂದು ಹರಮುಖ.

### ವೀರಭದ್ರ ದೇವರು

ಈ ದೇವರ ಪೂಜೆ ಸಾಮಾನ್ಯವಾಗಿ ಪ್ರತಿನಿತ್ಯ ನಡೆಯುತ್ತದೆ. ವಿಶೇಷ ಪೂಜೆ ಹಬ್ಬ ಹರಿದಿನಗಳಲ್ಲಿ ನಡೆಯುತ್ತದೆ. ಈ ದೇವರ ಭಕ್ತರು ಮದುವೆ ಮತ್ತು ಇನ್ನಿತರ ವಿಶೇಷ ಸಂದರ್ಭಗಳಲ್ಲಿ ಗುಗ್ಗಳ ಹೊರಡಿಸುತ್ತಾರೆ. ವಿಶೇಷ ವಾದ್ಯಗಳೊಂದಿಗೆ ನೃತ್ತಿಸುತ್ತಾ ಅವರು ಒಡಪುಗಳನ್ನು ಹೇಳುತ್ತಾ ದೇವರನ್ನ ಆರಾಧಿಸುತ್ತಾರೆ.

### ವಿಜಯದಶಮಿ

ಈ ಹಬ್ಬದ ದಿನ ಒಂಭತ್ತು ಅಥವಾ ಹತ್ತು ದಿನಗಳ ವಿಶೇಷ ಪೂಜೆ ನಡೆಯುತ್ತದೆ. ಮತ್ತು ಗ್ರಾಮ ಪ್ರದಕ್ಷಣೆಯು ನಡೆಯುತ್ತದೆ. ಈ ಹಬ್ಬದಲ್ಲಿ ಬನ್ನಿ ಮುಡಿಯಲು ದೇವಸ್ಥಾನದಿಂದ ಹೊರಮಠದ ಬನ್ನಿ ಮಹಾಂಕಾಳಿಗೆ ಹೋಗಿ ಬನ್ನಿ ಮುಡಿಯುವ ಪದ್ದತಿ ಇದೆ. ಆ ಸಂದರ್ಭದಲ್ಲಿ ಮೇಳಗಳೊಂದಿಗೆ ಊರ ಹೊರಗಿರುವ ಅಜ್ಜಯ್ಯನ ಮಠದೊಳಗಿರುವ ಬನ್ನಿ ಮಹಾಂಕಾಳಿಗೆ ಬನ್ನಿ ಮುಡಿದು ಬರುತ್ತಾರೆ. ಅವರು ಒಡಪುಗಳನ್ನು ಹೇಳುತ್ತಾರೆ. ವಿಶೇಷ ಸಂದರ್ಭದಲ್ಲಿ ಗುಗ್ಗಳ ಹೂಡುತ್ತಾರೆ.

### ಕೋಲಾ ಶಾಂತೇಶ್ವರ

ಪ್ರತಿದಿನ ಎರಡು ಸಾರಿ ಪೂಜೆಯು ನಡೆಯುತ್ತದೆ. ಸೋಮವಾರ ಮತ್ತು ಮಂಗಳವಾರ ವಿಶೇಷ ಪೂಜೆ ನಡೆಯುತ್ತದೆ.

### ದಸರಾ ಹಬ್ಬ

ಈ ಹಬ್ಬದ ದಿವಸ ವಿಶೇಷ ಪೂಜೆಯು ನಡೆಯುತ್ತದೆ. ಪ್ರತಿ ಅಮವಾಸೆ ದಿವಸ ಹೊರ ಮಠದಲ್ಲಿ ಅನ್ನ ಸಂತರ್ಪಣೆಯು ನಡೆಯುತ್ತದೆ. ದೇವರ ಕಾರ್ತಿಕೋತ್ಸವವು ಕಾರ್ತಿಕೋತ್ಸವವು ಡಿಸೆಂಬರ್ ಕೊನೆಗೆ ಇಲ್ಲವೇ ಜನವರಿ ಮೊದಲ ವಾರದಲ್ಲಿ ದೀಪವನ್ನು ಹಚ್ಚುವುದರ ಮೂಲಕ

ಕಾರ್ತಿಕೋತ್ಸವ ಜರುಗುತ್ತದೆ. ಇದರಲ್ಲಿ ಗ್ರಾಮದ ಜನರು ಸಾಮೂಹಿಕವಾಗಿ ಕಾರ್ತಿಕೋತ್ಸವವನ್ನು ಆಚರಿಸುತ್ತಾರೆ.

**ವಿಜಯದಶಮಿ**

ಈ ಹಬ್ಬದ ದಿವಸ ಗುಡಿಯಲ್ಲಿರುವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡು ವಾದ್ಯಮೇಳಗಳೊಂದಿಗೆ ಗ್ರಾಮದ ಎಲ್ಲಾ ಜನರು ಕೂಡಿಕೊಂಡು ಮೂರ್ತಿಯನ್ನು ಹೊರ ಮಠಕ್ಕೆ ಹೋಗಿ ಬನ್ನಿ ಮುಡಿದು ಬರುತ್ತಾರೆ.

**ಹಂಪಿ ಹುಣ್ಣಿಮೆ (ದವನ ಹುಣ್ಣಿಮೆ)**

ಈ ದಿನದ ವಿಶೇಷ ದೇವರ ಮೂರ್ತಿಯ ಹುಚ್ಚಯ್ಯ ಬಂಡಿಯಲ್ಲಿ (ಸಣ್ಣ ರಥ) ಮೂರ್ತಿ ಇಟ್ಟು ನಾಲ್ಕು ದಿವಸ ಹುಚ್ಚಯ್ಯ(ರಥ)ನನ್ನು ಎಳೆಯುತ್ತಾರೆ. ಐದು ದಿವಸಗಳಲ್ಲಿ ರಥೋತ್ಸವವು ಜರುಗುತ್ತದೆ.

ಸರ್ವರೂ ಈ ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ರಥೋತ್ಸವವು ಆದ ನಂತರ ಎರಡು ದಿನಗಳ ಕಾಲ ಕುಸ್ತಿಯು ಜರುಗುತ್ತದೆ. ಈ ಎಲ್ಲಾ ಕಾರ್ಯಗಳು ದೇಶೀ ಕೇಂದ್ರ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ಜರುಗುತ್ತವೆ.

**ಬಸವ ಜಯಂತಿ**

ಈ ಹಬ್ಬದಲ್ಲಿ ಸಾಮೂಹಿಕ ವಿವಾಹಗಳನ್ನು ಮಾಡುತ್ತಾರೆ. ೧೯೮೪ ರಿಂದ ಮಹಾ ಸನ್ನಿಧಿಯಲ್ಲಿ ನಾಲ್ಕು ಜೋಡಿಗಳಿಂದ ಆರಂಭವಾಗಿದ್ದ ಈ ಕಾರ್ಯ ಪ್ರಸ್ತುತ ದಿನಮಾನಗಳಲ್ಲಿ ಒಂದು ನೂರು ಜೊತೆಗಳ ಸಾಮೂಹಿಕ ವಿವಾಹಗಳು ನಡೆಯುತ್ತವೆ. ಈ ಸ್ವಾಮಿ ಸಮಾಜಮುಖಿ ಕಾರ್ಯದಲ್ಲಿ ಸಕ್ರೀಯವಾಗಿ ತೊಡಗಿಸಿಕೊಳ್ಳುತ್ತಾರೆ.

**ಮೈಲಾರಲಿಂಗ**

ಈ ದೇವರ ಪೂಜೆಯು ಪ್ರತಿ ದಿನ ನಡೆಯುತ್ತದೆ. ಅದರ ವಾರ ಭಾನುವಾರ ವಿಶೇಷ ಪೂಜೆಯು ನಡೆಯುತ್ತದೆ. ಕಾರ್ತಿಕೋತ್ಸವವು ಡಿಸೆಂಬರ್ ಕೊನೆಗೆ ಇಲ್ಲವೇ ಜನವರಿ ಮೊದಲ ವಾರದಲ್ಲಿ ದೀಪವನ್ನು ಹಚ್ಚುವುದರ ಮೂಲಕ ಕಾರ್ತಿಕೋತ್ಸವ ವಿಜೃಂಭಣೆಯಿಂದ ಜರುಗುತ್ತದೆ. ಈ ಗ್ರಾಮದ ಹಾಗೂ ಸುತ್ತಮುತ್ತಲಿನ ಗ್ರಾಮಗಳ ಜನರು ಸೇರಿ ಸಾಮೂಹಿಕವಾಗಿ ಕಾರ್ತಿಕೋತ್ಸವವನ್ನು ಆಚರಿಸುತ್ತಾರೆ.

**ಭರತ ಹುಣ್ಣಿಮೆ**

ಹುಣ್ಣಿಮೆಯಾದ ಏಳನೇ ದಿವಸದಲ್ಲಿ ಕಾರಣಿಕ ನಡೆಯುತ್ತದೆ. ಎಂಟನೆ ದಿವಸದಲ್ಲಿ ಸರಪಳಿ ಹರಿಯುವ ಕಾರ್ಯಕ್ರಮ ನಡೆಯುತ್ತದೆ. ಅರಸಿಕೇರಿ ಗ್ರಾಮದಿಂದ ಮೈಲಾರಲಿಂಗೇಶ್ವರ ಮೂರ್ತಿಯನ್ನು

ಪಲ್ಲಕ್ಕಿಯಲ್ಲಿಟ್ಟುಕೊಂಡು ಕನಕನಬಸಾಪುರ, ಅಡವಿಮಲ್ಲಾಪುರ ನಡುವೆ ಇರುವ ಮೈಲಾರಲಿಂಗ ದೇವಸ್ಥಾನಕ್ಕೆ ಹೋಗುತ್ತಾರೆ. ಆಗಿಹುಣ್ಣಿಮೆಯಲ್ಲಿ ಮೈಲಾರಲಿಂಗ ಮತ್ತು ಗಂಗಮಾಳವ್ವರ ವಿವಾಹ ಮಾಡುತ್ತಾರೆ.

**ವಿಜಯ ದಶಮಿ**

ಈ ಹಬ್ಬದಲ್ಲಿ ದೊಡ್ಡ ಬಂಡಿಯನ್ನು ಎರಡು ಎತ್ತುಗಳನ್ನು ಹೂಡುವುದರ ಮೂಲಕ ಬಂಡಿಯನ್ನು ಓಡಿಸುವ ಹಬ್ಬವನ್ನು, ಈ ಗ್ರಾಮದಲ್ಲಿ ಶ್ರೀಮಂತರೆನಿಸಿಕೊಂಡಿರುವ ಕಬಡದ ಮನೆತನದವರು ಚಾಲನೆ ನೀಡಿದರು. ಅಂದಿನ ದಿವಸ ಅಡವಿಯಲ್ಲಿರುವ ಮೈಲಾರಲಿಂಗಪ್ಪನ ಗುಡಿಯಲ್ಲಿ ಬನ್ನಿ ಮುಡಿಯುವ ಹಬ್ಬ ಇರುತ್ತದೆ. ಕಾರಣಿಕ ಮತ್ತು ಸರಪಳಿ ಹರಿಯುವ ಕಾರ್ಯಕ್ರಮವಿರುತ್ತದೆ.

**ಚಿಕ್ಕ ಆಂಜನೇಯ**

ಈ ದೇವರ ಪೂಜೆಯು ಪ್ರತಿದಿನವೂ ನಡೆಯುತ್ತದೆ. ವಿಶೇಷ ಪೂಜೆಯು ಶನಿವಾರ ನಡೆಯುತ್ತದೆ. ಇದರ ಕಾರ್ತಿಕೋತ್ಸವವು ಡಿಸೆಂಬರ್ ಕೊನೆಯ ವಾರದಲ್ಲಿ ಇಲ್ಲವೇ ಡಿಸೆಂಬರ್ ಮಾದಲ ವಾರದಲ್ಲಿ ನಡೆಯುತ್ತದೆ. ಯುಗಾದಿ ಪಾಡ್ಯದ ದಿವಸ ರಥೋತ್ಸವವು ಜರುಗುತ್ತದೆ. ಈ ಗ್ರಾಮದ ಎಲ್ಲಾ ಜನರೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ. ರಾತ್ರಿ ಪುರಾಣ, ಪ್ರವಚನ, ಭಜನೆಗಳನ್ನು ಹಚ್ಚಿರುತ್ತಾರೆ. ಪಾಡ್ಯದ ಮರುದಿನ ಬೆಳಿಗ್ಗೆ ಅಡವಿಗೆ ಬೇಟೆಯಾಡಲು ಹೊರಟ ಪದ್ದತಿಯು ಇಂದಿಗೂ ಇದೆ. ನಂತರ ಓಕಳಿ ಆಡುವ ಪದ್ದತಿ ಇಂದಿಗೂ ಆಚರಣೆಯಲ್ಲಿದೆ.

**ಬೀರಪ್ಪ**

ಈ ದೇವರ ಪೂಜೆ ಪ್ರತಿದಿನ ನಡೆಯುತ್ತದೆ. ವಿಶೇಷ ಪೂಜೆಯು ಹಬ್ಬ ಹರಿದಿನಗಳಲ್ಲಿ ನಡೆಯುತ್ತದೆ. ಇದರ ಕಾರ್ತಿಕೋತ್ಸವ ಡಿಸೆಂಬರ್ ಕೊನೆಯವಾರ ಅಥವಾ ಜನವರಿ ಮೊದಲ ವಾರದಲ್ಲಿ ದೀಪ ಹಚ್ಚುವುದರ ಮೂಲಕ ಕಾರ್ತಿಕೋತ್ಸವಕ್ಕೆ ಚಾಲನೆ ನೀಡುತ್ತಾರೆ. ರಾತ್ರಿ ಅನ್ನ ಸಂತರ್ಪಣೆ ನಡೆಯುತ್ತದೆ.

**ಕಾರ ಹುಣ್ಣಿಮೆ**

ಆ ದಿನವು ರಾತ್ರಿ ವಿಶೇಷ ಪೂಜೆ ನೆರವೇರುತ್ತದೆ. ಮತ್ತು ಭಜನೆ ಮಾಡುವುದು ಡೊಳ್ಳಿನ ವಾದ್ಯಗಳ ಮೇಳ ನಡೆಯುತ್ತವೆ.

**ಮುಸ್ಲಿಂ ಪೀರಲ ಹಬ್ಬ**

ಹನ್ನೆರಡು ಹುಣ್ಣಿಮೆ ಹಾಗೂ ಹನ್ನೆರಡು ಅಮವಾಸೆಗಳು ಮುಗಿದ ಮೇಲೆ ಅಲೆಗುಣಿಯನ್ನು ತೆಗೆದು ದೇವರನ್ನು ಕೂಡಿಸುವುದು. ಕನಕನ ಬಸಾಪುರದಿಂದ ಅಲೇದೇವರು ಮತ್ತು ಅರಸಿಕೇರಿಯ ಅಲೇದೇವರು ಕೋಲಾಶಾಂತೇಶ್ವರ ಮಠದಲ್ಲಿ ಎರಡು ದೇವರನ್ನು ಕೂಡಿಸಿ, ಸವಾಲು ಪದ

ರಿವಾಯಿತ್‌ಪದ, ಲಾವಣಿ ಪದಗಳನ್ನು ಹಾಡಿದ ನಂತರ ಎರಡು ದೇವರು ಅರಸಿಕೇರಿ ಗ್ರಾಮದ ಮಸೀದಿಗೆ ಹೋಗುತ್ತವೆ ಅಲ್ಲಿ ಸಕ್ಕರೆ ಓದಿಕೆ ಮಾಡಿಸಿ, ಅಲ್ಲಿಂದ ಕನಕನ ಬಸಾಪುರದ ಅಲೇದೇವರು ಊರಿಗೆ ಹೋಗುತ್ತದೆ. ಮಾರನೇ ದಿವಸ ಕತ್ತಲ ರಾತ್ರಿ ದಿನ ಪೂರ್ತಿ ಸವಾಲುಪದ ರಿವಾಯತಿಪದ, ಲಾವಣಿಪದಗಳನ್ನು ಹಾಡುತ್ತಾರೆ. ಈ ಸಂದರ್ಭದಲ್ಲಿ ಹಿಂದೂಗಳು ಹುಲಿ, ಕಳ್ಳಳ್ಳಿಬೊವ್ವ, ಬೇಡರಕಣ್ಣಪ್ಪರಂತಹ ವೇಷಗಳನ್ನು ಹಾಕಿಕೊಂಡು ತಪ್ಪದೇ ಹಲಗೆ ವಾದ್ಯಗಳ ಮೂಲಕ ಕುಣಿಯುತ್ತಾರೆ. ಕತ್ತಲ ರಾತ್ರಿ ಮಾರನೇ ದಿವಸ ದೇವರು ಹೊಳೆಗೆ ಹೋಗಿ ಮೈ ತೊಳೆದು ಬರುತ್ತವೆ.

**ಟಿಪ್ಪಣಿಗಳು**

೧. ಸಂಯುಕ್ತ ಕರ್ನಾಟಕ ಪತ್ರಿಕೆ ೧೨/೪/೨೦೦೭ ಗುರುವಾರ

೨. ಸಂಯುಕ್ತ ಕರ್ನಾಟಕ ೨೮/೨/೨೦೦೭ ಬುಧವಾರ

# ಅಧ್ಯಾಯ ೩

## ಆಚರಣೆ, ಸಂಪ್ರದಾಯ, ನಂಬಿಕೆ, ಹಬ್ಬಗಳು ಮತ್ತು ಜಾತ್ರೆಗಳು

ತನ್ನ ಬದುಕಿನ ಆರಂಭದಿಂದಲೂ ಮನುಷ್ಯ ಹಲವಾರು ಆಚರಣೆಗಳು ಪದ್ಧತಿಗಳು ನಡೆಸಿಕೊಂಡು ಬರಲು ಆತನಲ್ಲಿರುವ ಧಾರ್ಮಿಕ ನಂಬಿಕೆಯೆ ಕಾರಣ. ಮತ್ತು ಪ್ರೇರಣೆ ನಮ್ಮ ಬದುಕಿನ ಭಾಗವಾಗಿ ನಡೆಯುವ ಪ್ರತಿ ಆಚರಣೆ, ಸಂಪ್ರದಾಯಗಳಲ್ಲೂ ಧಾರ್ಮಿಕ ಭಾವನೆಗಳಿವೆ. ಕಾಲಕ್ರಮೇಣ ಈ ಭಾವನೆಗಳು ವಿಕಾಸಗೊಂಡಂತೆಲ್ಲಾ ಬೇರೆ ಬೇರೆ ಸ್ವರೂಪವನ್ನು ಪಡೆದುಕೊಂಡವು.

ಈ ಹಿನ್ನೆಲೆಯಲ್ಲಿ ನಿಸರ್ಗದಲ್ಲಿ ಕಾಣಿಸಿಕೊಳ್ಳುವ ಗುಡುಗು, ಮಿಂಚು, ಮಳೆ ಇತ್ಯಾದಿ ಬಗೆಗೆ ತನ್ನದೇ ಆದ ಅಭಿಪ್ರಾಯವನ್ನು ತಾಳಿದನು. ಇವುಗಳ ಶಬ್ದದ ಹಿಂದೆ ಯಾವುದೋ ಶಕ್ತಿಯ ಕೈವಾಡವಿದೆಯೆಂದು ಭಾವಿಸಿದನು. ಅಂತಹ ಕಾಣದ ಶಕ್ತಿಯನ್ನು ಪೂಜಿಸತೊಡಗಿದನು. ಸಹಜವಾಗಿ ಕಾಣಿಸಿದ ಮರ, ಮಣ್ಣು, ಕಲ್ಲುಗಳಲ್ಲಿ ದೇವರ ಅಂಶವನ್ನು ಕಂಡುಕೊಂಡುನು. ಪ್ರಜ್ಞಾಪೂರ್ವಕವಾಗಿಯೇ ಕೆಲವು ಆಚರಣೆಗಳನ್ನು ತನ್ನ ಬದುಕಿನ ಭಾಗವಾಗಿ ನೆರವೇರಿಸುತ್ತ ಬಂದನು. ಆಚರಣೆಗಳಲ್ಲಿ ನಂಬಿಕೆಗೆ ಬಹಳ ಪಾತ್ರವಿದೆ. ಜಗತ್ತಿನ ಯಾವುದೇ ಭಾಗದ ಜನರ ಬದುಕನ್ನೂ ನೋಡಿದರೂ ಈ ನಂಬಿಕೆಗಳು ಹಾಸು ಹೊಕ್ಕಾಗಿರುವುದು ಕಾಣುತ್ತೇವೆ. ಒಟ್ಟಾರೆ ನಂಬಿಕೆಗಳು ಮನುಷ್ಯನ ಬದುಕಿನ ಬೆನ್ನೆಲುಬಾಯಿತು.

ಶ್ರಮ ಜೀವಿಯಾದ ಮನುಷ್ಯ ತನ್ನ ಬದುಕಿನ ವಿರಾಮವನ್ನು ಪಡೆದುಕೊಳ್ಳಲೆತ್ನಿಸಿದನು. ಆ ಸಂದರ್ಭದಲ್ಲಿ ಸಂತೋಷವಾಗಿರಲು ತೇರು, ಜಾತ್ರೆ, ಮೊದಲಾದ ಸಮಷ್ಠಿ ಸ್ವರೂಪದ ಆಚರಣೆಗಳಿಗೆ ಮಾರು ಹೋದನು. ಆಚರಣೆಗಳು ಜನಜೀವನದ ಭಾಗವಾಗಿ ಮೂಡಿಬಂದಿದ್ದರಿಂದ ಇಲ್ಲಿ ವೈಯಕ್ತಿಕತೆಗಳಿಗಿಂತ ಸಮಷ್ಠಿಯ ಹಿತಾಶಕ್ತಿಯೇ ಪ್ರಮುಖವಾಗಿರುತ್ತದೆ. ತಾವಿರುವ ಪರಿಸರ ಹಿತರಕ್ಷಣೆಯೇ ಈ ಆಚರಣೆಗಳ ಪ್ರಮುಖ ಉದ್ದೇಶ ಇಂಥವುಗಳ ಜಾತ್ರೆಯ ಪಾತ್ರವು ಗಮನಾರ್ಹವಾದುದು. ಜಾತ್ರೆಯು ನಡೆಯುವ ಸ್ಥಳದ ಹೆಸರಿನಿಂದ ಹಾಗೂ ಅಲ್ಲಿಯ ದೇವರ ಹೆಸರಿನಿಂದ ಜನಪ್ರಿಯತೆಯನ್ನು ಗಳಿಸುತ್ತದೆ. ಪರಂಪರಾಗತವಾಗಿ ಬಂದ ಇವು ಹಲವಾರು ಆಶಯಗಳನ್ನೊಳಗೊಂಡಿದೆ.

ಒಂದು ನಿರ್ದಿಷ್ಟ ವೇಳೆಯಲ್ಲಿ ಜನರೆಲ್ಲಾ ಸೇರಿ ದೇವರನ್ನು ಪೂಜಿಸುವುದಕ್ಕೆ ಜಾತ್ರೆ ಎಂದು ಕರೆಯುತ್ತಾರೆ. ಅವರು ಇದರ ಮುಖ್ಯ ಬಂಡವಾಳ ಇಡೀ ವರ್ಷದ ಬದುಕಿನಲ್ಲಿ ಸೋತು ಹೋದ

ಜನರು ಯಾಂತ್ರಿಕತೆ ಮತ್ತು ಏಕತಾನೆತೆಯಲ್ಲಿ ನಾನಾ ರೀತಿಯ ದೃಶ್ಯಗಳನ್ನು ಗಮನಿಸುತ್ತಾ ತಮ್ಮ ಹಣಕಾಸಿನ ಪರಿಸ್ಥಿತಿಗೆ ತಕ್ಕಂತೆ ವಸ್ತುಗಳನ್ನು ಕೊಂಡುಕೊಳ್ಳಲು, ಸಂತೋಷಪಡಲು ಸೂಕ್ತ ಅವಕಾಶಗಳನ್ನು ನೀಡುವ ಪರಿಸರವೇ ಜಾತ್ರೆ.

**ಆಚರಣೆಗಳು**

"ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ ಎನ್ನಲಾಗಿದೆ." ಗ್ರಾಮದೈವಗಳನ್ನು ಅಧ್ಯಯನ ಮಾಡಲು ಆಚರಣೆಗಳೇ ಆಧಾರ ಹರಕೆಗಳನ್ನು ಆಚರಣೆ ಒಳಗೊಂಡಿರುತ್ತದೆ. ಆಚರಣೆ ಕಡ್ಡಾಯವಾದರೆ ಹರಕೆಯನ್ನು ಹರಸಿಕೊಂಡವರು ಮಾತ್ರ ಒಪ್ಪಿಸುತ್ತಾರೆ. ಆಚರಣೆ ಸಾಮೂಹಿಕವಾದದ್ದು ಹರಕೆ ವಯಕ್ತಿಕವಾದದ್ದು, ಹರಕೆಯು ಆಚರಣೆಯ ರೂಪದಲ್ಲಿಯೇ ನಡೆಯುತ್ತದೆ. "ದಂಡಿದುರುಗಮ್ಮ" ಭಕ್ತಿಪೂರ್ವಕವಾಗಿ ಆಚರಣೆಗಳು ನೆರವೇರುತ್ತವೆ. ಪ್ರತಿ ಮಂಗಳವಾರ ಮತ್ತು ಶುಕ್ರವಾರ ವಿಶೇಷ ಪೂಜೆ ನಡೆಯುತ್ತದೆ. ಭಕ್ತಿಪೂರ್ವಕವಾಗಿ ಅಮ್ಮನ ಸನ್ನಿಧಿಗೆ ಬಂದು ಹಾಲು ತುಪ್ಪ ಮೊಸರು ಅಕ್ಕಿ ಬೆಲ್ಲ ಬೇಳೆ ಇಂತಹ ದಾನ್ಯಗಳನ್ನು ಸನ್ನಿಧಿಗೆ ಒಪ್ಪಿಸುವ ಆಚರಣೆ ಇಂದಿಗೂ ಇದೆ.

ಜಾತ್ರಿಯಲ್ಲಿ ದುರಿಗ್ಯೆರು ಒಪತ್ತಿನ ಮೂಲಕ ವ್ರತವನ್ನು ಕೈಕೊಂಡು ಪೂಜೆಯ ಪ್ರತಿವರ್ಷವೂ ಆಚರಿಸುತ್ತಾರೆ. ಈ ಭಾಗದಲ್ಲಿ ಜನರು ಭೂಮಿಗೆ ಉಡಿತುಂಬುವ ಮೊದಲು ಅಮ್ಮನ ಸನ್ನಿಧಿಗೆ ದಾನ್ಯವನ್ನು ಅರ್ಪಿಸುತ್ತಾರೆ. ತಮ್ಮ ಮನೆಯಲ್ಲಿ ಹಸು, ಮೇಕೆ, ಕರು ಹಾಕಿದ ಮೊದಲನೆ ದಿನದ ಹಾಲನ್ನು ಕರೆದು ಅಮ್ಮನ ಸನ್ನಿಧಿಗೆ ಕಳಿಸುತ್ತಾರೆ.

ಹಸು ಮೇಕೆ ರೋಗಕ್ಕೆ ತುತ್ತಾದಾಗ ಅದು ಬದುಕಿದರೆ ಅದರಿಂದ ಬಂದ ಎಲ್ಲ ಮೇಕೆ ಹಸುವನ್ನು ಮಾರಿ ಬಂದ ಹಣದಿಂದ ಸನ್ನಿಧಿಗೆ ವಸ್ತು ರೂಪದಲ್ಲಿ ಕಾಣಿಕೆ ಕೊಡುತ್ತಾರೆ. ತಮ್ಮ ಭೂಮಿಯಲ್ಲಿ ಬೆಳೆದ ಮೊದಲನೆ ದಾನ್ಯವನ್ನು ಸನ್ನಿಧಿಗೆ ಅರ್ಪಿಸುತ್ತಾರೆ. ಮಕ್ಕಳು ಬದುಕಲಾರದ ತಂದೆ ತಾಯಿಗಳು ನನ್ನ ಮಕ್ಕಳು ಬದುಕಿದರೆ ನಿನಗೆ ಬಂಗಾರ ಆಭರಣವನ್ನು ಕೊಡುತ್ತೇನೆ. ನನ್ನ ಮಗನಿಗೆ ಕಾಯಿಲೆಯಿಂದ ವಾಸಿಯಾದರೆ ದೀಡ ನಮ್ಮಸ್ಕಾರವನ್ನು ಹಾಕುತ್ತೇನೆ.

**ಸಂಪ್ರದಾಯ**

ಜಾತ್ರೆಯ ಸಂದರ್ಭದಲ್ಲಿ ಪ್ರತಿವರ್ಷ ಒಂದು ಸೀರೆ ಮತ್ತು ಕುಪ್ಪಸವನ್ನು ಊರಿನ ಶ್ರೀಮಂತರಾದ ಈಡಿಗಾರ ಲಚ್ಚಮ್ಮ ಕುಟುಂಬದವರು ಇಂದಿಗೂ ಕೊಡುತ್ತ ಬಂದಿರುತ್ತಾರೆ.

**ನಿಚ್ಚವನಹಳ್ಳಿ**

ಸೂನೆವು ಹಬ್ಬದ ದಿನದಲ್ಲಿ ಕಟ್ಟಿಗೆಯನ್ನು ತರುವ ಸಂಪ್ರಾದಾಯವು ಇಂದಿಗೂ ಇದೆ. ದೇವಿ ಗುಡಿದುಂಬುವಾಗ ಎಳೆಮರಿಯನ್ನು ಕೊಡುವ ಪದ್ದತಿ ಇಂದಿಗೂ ಆಚರಣೆಯಲ್ಲಿದೆ. ಇದನ್ನು ಬಾರಿಕರಿಗೆ ಕೊಡುತ್ತಾರೆ. ಬಾಗಿಲ ಮರಿ ಕೊಡುವ ಪದ್ಧತಿ ಇಂದಿಗೂ ಆಚರಣೆಯಲ್ಲಿದೆ. ಇದನ್ನು

ದುರಿಗೈರಿಗೆ ಕೊಡುತ್ತಾರೆ. ಕರಗಲ್ಲ ಮರಿ ದೇವಿಯು ಗುಡಿ ದುಂಬುವ ಸಂದರ್ಭದಲ್ಲಿ ಈ ಪದ್ಧತಿಯು ಇಂದಿಗೂ ಇದೆ. ಇದರ ಪಾಲನ್ನು ಊರಿನ ತಳವಾರನಿಗೆ ಕೋಡುತ್ತಾರೆ. ಅರ್ಚಕ ವಂಶಸ್ಥರು ಮೃತ್ಯು ಹೊಂದಿದ್ದರೆ ಆ ವ್ಯಕ್ತಿಯನ್ನು ಪ್ರತ್ಯೇಕ ಇರುವ ರುದ್ರಭೂಮಿಯಲ್ಲಿ ಶವಸಂಸ್ಕಾರ ಮಾಡುತ್ತಾರೆ. ಇದೇ ವಂಶಸ್ಥರಾದ ಸ್ತ್ರೀಯರೂ ಮೃತ್ಯ ಹೊಂದಿದರೆ ಸಮೂಹಿಕವಾಗಿ ಇರುವ ರುದ್ರಭೂಮಿಯಲ್ಲಿ ಶವಸಂಸ್ಕಾರ ಮಾಡುತ್ತಾರೆ. ಈ ಸಂಪ್ರದಾಯವು ಇಂದಿಗೂ ಆಚರಣೆಯಲ್ಲಿದೆ.

ದೇವಿಯ ಸೇವೆಗೆ (ದೇವದಾಸಿಯರನ್ನ) ದುರಿಗೈರನ್ನ ನೇಮಿಸುತ್ತಾರೆ. (ಮೂಲದಲ್ಲಿ ದ್ರಾವಿಡ ಸಂಸ್ಕೃತಿಯ ಪ್ರಕಾರ ಸ್ತ್ರೀಯನ್ನು ಪೂಜಾರಣಿಯಾಗಿ ನೇಮಿಸುತ್ತಿದ್ದರು) ಕಾಲವಿಕಾಸವಾದಂತೆ ದಾಸವ್ವ ದಾಸಪ್ಪ, ಜೋಗಪ್ಪ ಜೋಗವ್ವ, ಹಬ್ಬ ಹರಿದಿನಗಳಲ್ಲಿ ವಿಶೇಷವಾದ ಸ್ಥಾನಮಾನ. ಕೆಳವರ್ಗದವರಿಗೆ ಇವರು ಶ್ರೇಷ್ಠರು, ಪೂಜ್ಯಭಾವನೆಯಿಂದ ಕಾಣುತ್ತಾರೆ. ದುರಿಗೈರ ಊಟದಲ್ಲಿ ಇವರು ಪ್ರಸಾದವನ್ನು ಸ್ವೀಕರಿಸುವವರಿಗೆ ಯಾರೂ ಊಟ ಮಾಡುವಂತಿಲ್ಲ. ಇವರು ಬಿಟ್ಟ ಎಂಜಲು ಎನ್ನದೇ ಅದನ್ನು ಎಂಜಲು ಎನ್ನುವ ಮನೋಭಾವ ಬಾರದೇ ಪ್ರಸಾದವೆಂದು ಸ್ವೀಕರಿಸುತ್ತಾರೆ. ಈ ಪದ್ದತಿಯು ಇಂದಿಗೂ ಆಚರಣೆಯಲ್ಲಿದೆ.

### ಹಬ್ಬಗಳು

### ಯುಗಾದಿ ಹಬ್ಬ

ಈ ಹಬ್ಬದ ದಿನ ಅಡವಿಮಲ್ಲಾಪುರದವರು ಊರಿನ ಮಧ್ಯದಲ್ಲಿರುವ ಅಮ್ಮನ ಕಟ್ಟಿಯನ್ನು ಮಾಡಿಕೊಂಡು. ಎಲ್ಲಾ ಭಕ್ತರೂ ಭಕ್ತಿಯಿಂದ ದೇವಿಯ ಬುಟ್ಟಿಗೆ ನಂತರ ಹಣ್ಣು ಕಾಯಿ ನೈವೇದ್ಯವನ್ನು ಅರ್ಪಿಸುತ್ತಾರೆ. ಅದನ್ನು ಆ ಊರಿನ ಮುಖ್ಯಸ್ಥರು ಅರಸಿಕೇರಿ ದಂಡಿನ ದುರುಗಮ್ಮನ ಸನ್ನಿದಿಗೆ ತಂದು ಅರ್ಪಿಸುತ್ತಾರೆ.

### ಜೋಷಿಲಿಂಗಾಪುರ

ಊರಿನ ಮಧ್ಯದಲ್ಲಿರುವ ಅಮ್ಮನ ಕಟ್ಟಿಗೆ ಹಬ್ಬದ ದಿನ ಹಣ್ಣು ಕಾಯಿ ನೈವೇದ್ಯವನ್ನು ತಂದುಕೊಡುತ್ತಾರೆ. ಎಲ್ಲಾ ಭಕ್ತರು ತಂದ ನೈವೇದ್ಯವನ್ನು ಅರಸಿಕೇರಿದಂಡಿ ದುರುಗಮ್ಮನಗೆ ಊರಿನ ಬಣಕಾರರು ಅರ್ಪಿಸುತ್ತಾರೆ.

### ಹಿಕ್ಕಿಮಗೆರಿ

ಈ ಹಬ್ಬದ ದಿನ ಊರಿನ ಮಧ್ಯದಲ್ಲಿ ಅಮ್ಮನ ಕಟ್ಟಿಗೆ ಹಣ್ಣು ಕಾಯಿ, ನೈವೇಧ್ಯವನ್ನು ಕೊಡುತ್ತಾರೆ. ಅದನ್ನು ಊರಿನ ಬಣಕಾರ ಅರಸಿಕೆರಿಯ ದಂಡಿನ ದುರುಗಮ್ಮನಗೆ ನೈವೇಧ್ಯವನ್ನು ಅರ್ಪಿಸುತ್ತಾರೆ.

### ಬಸಾಪುರ

ಈ ಹಬ್ಬದ ದಿನ ಊರಿನ ಮಧ್ಯದಲ್ಲಿ ಅಮ್ಮನ ಕಟ್ಟಿಗೆ ಹಣ್ಣು ಕಾಯಿ ನೈವೇದ್ಯವನ್ನು

ಭಕ್ತಿಪೂರ್ವಕವಾಗಿ ಅರ್ಪಿಸುತ್ತಾರೆ. ನಂತರ ಅದನ್ನು ಊರಿನ ಮುಖ್ಯಸ್ಥರು ಅರಸಿಕೇರಿ ದಂಡಿನ ದುರುಗಮ್ಮನ ಸನ್ನಿಧಿಗೆ ಅರ್ಪಿಸುತ್ತಾರೆ.

### ಯರಬಳ್ಳಿ

ಈ ಹಬ್ಬದ ದಿನ ಊರಿನ ಮುಂದಿನ ಬೇವಿನ ಕಟ್ಟೆಗೆ ಅರ್ಚಕರು ತಂದ ದೇವಿಯ ಬುಟ್ಟಿಗೆ ಭಕ್ತಿಪೂರ್ವಕವಾಗಿ ಎಲ್ಲಾ ಭಕ್ತರೂ ಹಣ್ಣು ಕಾಯಿ ಮತ್ತು ನೈವೇದ್ಯವನ್ನು ಅರ್ಪಿಸುತ್ತಾರೆ. ಅದನ್ನು ಅರ್ಚಕರು ಅಮ್ಮನ ಸನ್ನಿಧಿಗೆ ಅರ್ಪಿಸುತ್ತಾರೆ.

### ಸುನೇವು ಹಬ್ಬ

ಈ ಹಬ್ಬವನ್ನು ಅರ್ಚಕ ವಂಶದವರು ಯರಬಳ್ಳಿ ಊರಿನ ಮುಂದೆ ಇರುವ ಬೇವಿನಕಟ್ಟೆಗೆ ಅರ್ಚಕ ವಂಶಸ್ಥರು ಭಕ್ತಿಪೂರ್ವಕವಾಗಿ ನೈವೇದ್ಯವನ್ನು ಅರ್ಪಿಸುತ್ತಾರೆ. ಇದು ಇಂದಿಗೂ ರೂಢಿಯಲ್ಲಿದೆ.

### ಹಬ್ಬ

ಈ ಹಬ್ಬವನ್ನು ಅರ್ಚಕ ವಂಶಸ್ಥರು ಮಾತ್ರ ನೆರವೇರಿಸುತ್ತಾರೆ. ಜಾತ್ರೆ ಮುಗಿದ ಎಂಟು ದಿನಗಳ ನಂತರ ಶುಕ್ರವಾರದಂದು ದುರ್ಗಿಯ ಪರಮ ಭಕ್ತನಾದ ಮರಿಯಜ್ಜನ ಹಬ್ಬವನ್ನು ಮಾಡಲಾಗುತ್ತದೆ. ಈ ವಿಶೇಷವೆಂದರೆ ಅರ್ಚಕ ವಂಶಸ್ಥರು ದೈವದೀನರಾದ ಹಿರಿಯರ ಸಮಾದಿಗಳಿಗೆ ಕೋಳಿ ಕುರಿಯನ್ನು ಬಲಿಕೊಡುವುದರ ಮೂಲಕ ಈ ಹಬ್ಬವು ಆರಂಭವಾದ ಅದೇ ದಿನ ರಾತ್ರಿ ಅರ್ಚಕ ವಂಶದ ಎಲ್ಲಾ ಮನೆಯಿಂದಲೂ ಎಡೆಯನ್ನು ಒಟ್ಟಾಗಿ ತೆಗೆದುಕೊಂಡು ಪಂಜನ್ನು ಹಿಡಿದು ಉದೋ, ಉದೋ, ಎಂದು ಕೂಗುತ್ತಾ ಹಿರಿಯರ ಸಮಾಧಿಗಳಿಗೆ ಪುಜಾ ಪುನಸ್ಕಾರಗಳನ್ನು ಸಲ್ಲಿಸಿ ಅದೇ ರೀತಿಯಾಗಿ ದೇವಾಲಯದಲ್ಲಿ ಸಹ ದುರ್ಗಿಯನ್ನು ಪೂಜಿಸಿದ ನಂತರ ಉಟೋಪಚಾರಗಳು ನಡೆಯುತ್ತವೆ.

### ನಾಗರ ಪಂಚಮಿ

ಅಡವಿಮಲ್ಲಪುರ ಜನರು ನಾಗರಪಂಚಮಿ ಹಬ್ಬದಲ್ಲಿ ಭಕ್ತಿಪೂರ್ವಕವಾಗಿ ಹೋಳಿಗೆಯ ನೈವೇದ್ಯ ಮಾಡಿ ಆ ಊರಿನ ಎಲ್ಲಾ ಜನರು ದಂಡಿ ದುರುಗಮ್ಮನಗೆ ಅರ್ಪಿಸುತ್ತಾರೆ.

### ಜೋಷಿ ಲಿಂಗಪುರ

ಈ ಊರಿನ ಭಕ್ತರೂ ಭಕ್ತಿಪೂರ್ವಕವಾಗಿ ಅಮ್ಮನ ಸನ್ನಿಧಿಗೆ ನಾಗರ ಪಂಚಮಿ ಹಬ್ಬದ ದಿನದಂದೂ ಹಣ್ಣು, ಕಾಯಿ, ಕರ್ಪೂರ, ಹೋಳಿಗೆಯ ನೈವೇದ್ಯ ಮಾಡಿ ಅರ್ಪಿಸುತ್ತಾರೆ.

### ಕಸವನಹಳ್ಳಿ

ಈ ಗ್ರಾಮದ ಜನರು ನಾಗರ ಪಂಚಮಿ ಹಬ್ಬದ ದಿನದಂದು ಭಕ್ತಿಪೂರ್ವಕವಾಗಿ ಊರಿನ

ಎಲ್ಲಾ ಭಕ್ತರು ಅಮ್ಮನ ಕಟ್ಟೆಗೆ ಹಣ್ಣು, ಕಾಯಿ, ಕರ್ಪೂರ, ನೈವೇದ್ಯ ಮಾಡಿ ಅಲ್ಲಿಂದ ಊರಿನ ಹಿರಿಯರ ಸಮ್ಮುಖದಲ್ಲಿ ಅರಸಿಕೇರಿ ದಂಡಿನ ದುರುಗಮ್ಮನಿಗೆ ನೈವೇದ್ಯ ಮಾಡುತ್ತಾರೆ.

**ಯರಬಳ್ಳಿ**

ಈ ಊರಿನ ಜನರು ಭಕ್ತಿಪೂರ್ವಕವಾಗಿ ಈ ಹಬ್ಬದ ದಿನ ಅಮ್ಮನ ಕಟ್ಟೆಗೆ ಹೋಳಿಗೆ ನೈವೇದ್ಯ ಅರ್ಪಿಸುತ್ತಾರೆ. ಅದನ್ನು ಅರ್ಚಕ ವರ್ಗದವರು ದೇವಿಯ ಸನ್ನಿಧಿಗೆ ಅರ್ಪಿಸುತ್ತಾರೆ.

**ದಸರಾ ಹಬ್ಬ (ನವರಾತ್ರಿ ಹಬ್ಬ)**

ಈ ಹಬ್ಬದಲ್ಲಿ ಇತರೇ ಎಲ್ಲಾ ದೇವತೆಗಳಂತೆಯೂ ಇಲ್ಲಿಯೂ ಕೂಡಾ ೯ ದಿನಗಳ ಕಾಲ ದೇವರ ಪೂಜೆ ಪುನಸ್ಕಾರಗಳು ನೆರವೇರುತ್ತವೆ. ಆರಂಭವಾಗುವ ಮೊದಲ ದಿನ ಇಡೀ ದೇವಾಲಯವನ್ನು ಸ್ವಚ್ಚಗೊಳಿಸಿ,ತೆಂಗಿನ ಗರಿ ಮತ್ತು ಕಬ್ಬಿನ ಕೋಲುಗಳಿಂದ ಅಲಂಕರಿಸಿ ದೇವತೆಯನ್ನು ಸಹ ಶೃಂಗಾರ ಮಾಡಿ ದೀಪಾಲಂಕಾರಗಳಿಂದ ಪೂಜೆ ಪ್ರಾರಂಭಿಸುತ್ತಾರೆ.

ಹಬ್ಬದ ಆರಂಭದ ದಿನದಿಂದ ಕೊನೆಯ ಒಂಭತ್ತನೆಯ ದಿನದವರೆಗೂ ದೇವಾಲಯದಲ್ಲಿ ಭಜನೆ, ಪುರಾಣ, ಪ್ರವಚನವನ್ನು ಏರ್ಪಡಿಸಿ, ಅದೇ ರೀತಿ ಜಾನಪದ ಕಲಾವಿದರೂ ದೇವಿಯ ನಾಮಾವಳಿಗಳನ್ನು ಸೋಬಾನ ಹಾಡುಗಳ ಮೂಲಕ ಹಬ್ಬವನ್ನು ಆಚರಿಸುವರು. ೯ ದಿನವಾದ ಕೊನೆಯ ದಿನ ದೇವತೆಗೆ ಬನ್ನಿಯಿಂದ ಅಲಂಕಾರ ಮಾಡಿ, ಬನ್ನಿ ಪೂಜೆಯನ್ನು ಮುಗಿಸಿ ಎಲ್ಲಾ ಭಕ್ತರು ಮೊದಲು ದೇವರಿಗೆ ಬನ್ನಿ ಅರ್ಪಿಸಿ ನಂತರ ಹಿರಿಯರಿಗೆ ನಮಿಸುವುದು ಸಂಪ್ರದಾಯವಾಗಿದೆ.

**ಜಾತ್ರೆಗಳು**

'ಜಾತ್ರೆ' ಎಂಬ ಶಬ್ಧ ಯಾತ್ರೆಯ ತದ್ಭವ ರೂಪ ಜಾತ್ರೆ, ಪರಿಕ್ಷೆ, ಪರ್ವ ಈ ಶಬ್ದಗಳಲ್ಲಿ ಸಂಸ್ಕೃತ ಮೂಲದಿಂದ ಬಂದಂತಹವ. ಯಾತ್ರಾದಿಂದ ಜಾತ್ರೆ ಬಂದಂತೆ ಪರಿಷತ್ ಎಂಬುವುದರಿಂದ ಪರಿಕ್ಷೆ ಹುಟ್ಟಿಕೊಂಡವು. ಯಾತ್ರೆ ಮತ್ತು ಜಾತ್ರೆ ಇವೆರಡು ಒಂದೇ ಮೂಲದಿಂದ ಕಾಣಿಸಿಕೊಂಡಿದ್ದರೂ ಬೇರೆ ಬೇರೆ ಅರ್ಥ ಪರಿಕಲ್ಪನೆ ಪಡೆದುಕೊಂಡು ಬಳಕೆಯಾಗುತ್ತದೆ. ಯಾತ್ರೆ ಎಂಬ ರೂಪ ಉತ್ತಮ ಹಾಗೂ ಶಿಷ್ಠಾರ್ಥದಲ್ಲಿ ಬಳಕೆಯಾಗುತ್ತದೆ. ಜಾತ್ರೆ ಎಂಬ ರೂಪ ಅದಕ್ಕಿಂತ ಸ್ವಲ್ಪ ಕೆಳಗೆ ಮತ್ತು ಶಿಷ್ಟೇತ್ತರ ಅರ್ಥದಲ್ಲಿ ರೂಢಿಯಲ್ಲಿದೆ ಯಾತ್ರೆ ಹೋಗುವುದೆಂದರೆ ಪುಣ್ಯಕ್ಷೇತ್ರಗಳಲ್ಲಿ ನೋಡಲು, ದೂರದಲ್ಲಿರುವ ದೇವತೆ ಇಲ್ಲವೇ ದೈವಾಂಶ ಸಂಭೂತರಾಗಿ ಸಾಧುಸಂತರಿಗೆ ಪೂಜೆ ಹರಕೆಗಳನ್ನು ಸಲ್ಲಿಸಲು, ಜನರು ವರ್ಷದ ಒಂದು ನಿರ್ದಿಷ್ಟ ಕಾಲದಲ್ಲಿ ಹೋಗಿ ಬರುವುದು.

ಊರಿನ ಗ್ರಾಮ ದೇವತೆಯಾದ ಶ್ರೀದಂಡಿನ ದುರುಗಮ್ಮನ ಜಾತ್ರೆಯು ನಾಡಿನಲ್ಲಿ ವಿಶೇಷವಾಗಿ ಜರುಗುತ್ತದೆ. ಈ ಜಾತ್ರೆ ಅಂದು ಕಾರ್ತಿಕೋತ್ಸವವನ್ನು ದೀಪಾಲಂಕಾರಗಳ ಮೂಲಕ ನೆರವೇರಿಸುತ್ತಾರೆ. ಈ ಜಾತ್ರೆಯಲ್ಲಿ ನಾಡಿನ ಜನ ನಾನಾ ಮೂಲೆಗಳಿಂದ ಸಾಗರೋಪಾದಿಯಲ್ಲಿ ಹರಿದು ಬರುತ್ತಾರೆ.

ಈ ಜಾತ್ರೆಯ ಪ್ರಮುಖ ವಿಶೇಷವೆಂದರೆ ಜಾತ್ರೆಯ ಮೂರನೇಯ ದಿನವಾದ ಭಾನುವಾರ ಸುರ್ಯೋದಯಕ್ಕೆ ಮುನ್ನ ಹೊಳೆ ಪೂಜೆಗೆ ಹೋಗುವುದು ವಿಶೇಷವಾಗಿದೆ. ಈ ಸಂದರ್ಭದಲ್ಲಿ ಭಕ್ತರ ತಂಡೋಪ ತಂಡವಾಗಿ ಬಂದು. ದೇವಿಯ ಹೊತ್ತ ಅರ್ಚಕನ ಪಾದ ಸ್ಪರ್ಶ ಮಾಡಲು ಅಡ್ಡಲಾಗಿ ಮಲಗುತ್ತಾರೆ. ಅರ್ಚಕನು ಅವರ ಬೆನ್ನುಗಳ ಮೇಲೆ ನಡೆದು ಹೊಳೆಯನ್ನು ಸೇರುವುದು ವಿಶೇಷವಾಗಿದೆ. ನಂತರ ಹೊಳೆಯಲ್ಲಿ ಪೂಜಾ ಪುನಸ್ಕಾರಗಳು ನಡೆದ ನಂತರ ದೇವಿಯು ಮತ್ತೇ ಹೊಳೆಯಿಂದ ದೇವಾಲಯವನ್ನು ಪ್ರವೇಶಿಸಲು ಬರುವಾಗ ದೇವಿಗೆ ಭಕ್ತಾದಿಗಳು ಸಾವಿರಾರು ಕುರಿಗಳನ್ನು ಬಲಿಕೊಡುತ್ತಾರೆ. ತದನಂತರ ಅಲ್ಲಿಂದ ದೇವಾಲಯದವರೆಗೂ ಕೂಡಾ ಜನ ಸಮೂಹದೊಂದಿಗೆ ಭಕ್ತಾದಿಗಳ ಬೆನ್ನು ಮೇಲೆ ನಡೆಯುತ್ತಾ ದೇವಾಲಯದ ದ್ವಾರ ಬಂದಾಗ ಅರ್ಚಕ ವಂಶದವರೆಲ್ಲಾ ದೇವತೆಗೆ ಆರತಿ ಮತ್ತು ಒಕಳಿಯನ್ನು ಮಾಡುತ್ತಾರೆ. ನಂತರ ಭಕ್ತಾದಿಗಳಿಂದ ಉದೋ, ಉದೋ, ಉದ್ಗಾರದೊಂದಿಗೆ ದೇವಿಯ ಗುಡಿದುಂಬಿಸುತ್ತಾರೆ.

ದೇವಿಗೆ ಹಾಕಿದ ಹಾರ ಮತ್ತು ದೇವಿಯ ಪರಮ ಭಕ್ತನಾದ ಮರಿಯಜ್ಜನ ಹಾರಗಳು ದೇವಿಯ ಬಾವುಟವನ್ನು ಭಕ್ತಾದಿಗಳ ಸಮ್ಮುಖದಲ್ಲಿ ಹರಾಜು ಮಾಡುತ್ತಾರೆ. ನಂತರ ಹರಾಜಿನಲ್ಲಿ ತೆಗೆದುಕೊಂಡ ಭಕ್ತಾದಿಗಳಿಗೆ ಅವುಗಳನ್ನು ಅರ್ಪಿಸುತ್ತಾರೆ.

ಅದೇ ದಿನ ಸಂಜೆ ದೇವಿಯ ಮುಂದೆ ರಾಸವಾಳ ಎಂಬ ಎಡೆಯನ್ನು ಹಾಕಿ ದೇವಾಲಯದ ಹೊರ ಭಾಗದಲ್ಲಿ ಸಾವಿರಾರು ಭಕ್ತಾದಿಗಳು ಜಾತಿ ಬೇಧಗಳಿಲ್ಲದೇ ಒಟ್ಟಾಗಿ ಕುಳಿತು ಅರ್ಚಕ ವಂಶದವರು ಮಾಡಿದ ಪ್ರಸಾದವನ್ನು ಏಕಕಾಲದಲ್ಲಿ ಸ್ವೀಕರಿಸುತ್ತಾರೆ. ಅದರೊಳಗೆ ಹಾಲನ್ನು ರಾಸವಾಳ ಎಡೆ ಮಾಡಿ ಮುಂದೆ ಮೂರು ದಿನಗಳ ಕಾಲ ಒಪತ್ತನ್ನು ಮಾಡಿದ ದುರುಗಿರನ್ನೇ ಕೂಡಿಸಿ ಪೂಜೆ ನಡೆದ ನಂತರ ದುರುಗಿಯರು ಮೊದಲು ಪ್ರಸಾದ ಸ್ವೀಕರಿಸುತ್ತಾರೆ.

ಜನರು ಇಂತಹ ಧಾರ್ಮಿಕ ದೈವತ್ವದ ಸಿರಿವಂತಿಕೆಯು ಭಾವೈಕ್ಯತೆಯಿಂದ ಬದುಕನ್ನು ಸಾಗಿಸುತ್ತಿದ್ದಾರೆ. ಹಾಗೆಯೇ ಅರಸಿಕೇರಿ ಪೂರ್ವ ದಿಕ್ಕಿನಲ್ಲಿರುವ ಬಾದಾಮಿ ಚಾಲುಕ್ಯರ ಆರನೇ ವಿಕ್ರಮಾದಿತ್ಯನು ಕಟ್ಟಿಸಿದ ಶಿವ ದೇವಾಲಯವಿದ್ದು, ಶಿವನ ಮುಂದಿನ ಆಳೆತ್ತರದ ನಂದಿ ವಿಗ್ರಹ ಕೂಡಾ ಶಿವನೊಂದಿಗೆ ಪೂಜೆಗೆ ಅರ್ಹವಾಗಿದೆ. ಇಲ್ಲಿ ಕೂಡಾ ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ಕಾರ್ತಿಕೋತ್ಸವವನ್ನು ಆಚರಿಸುತ್ತಾರೆ. ಇಲ್ಲಿ ಕೂಡಾ ಅರಸಿಕೇರಿ ಮತ್ತು ಕೆರೆಗುಡಿಹಳ್ಳಿ ಜನತರ ಜೊತೆಗೆ ಅನೇಕ ಹಳ್ಳಿ ಭಕ್ತರೂ ಸಹ ಭಾಗವಹಿಸಿ ಕಾರ್ತಿಕದಲ್ಲಿ ಮೈಕೊರೆಯುವ ಚಳಿಯಲ್ಲಿ ಬೆಳದಿಂಗಳ ರಾತ್ರಿಯಲ್ಲಿ ಸಾಮೂಹಿಕ ಪ್ರಸಾದವನ್ನು ಸ್ವೀಕರಿಸುತ್ತಾರೆ, ಹಾಗೆಯೇ ಊರ ಮಧ್ಯದಲ್ಲಿರುವ ಕೋಲಾ ಶಾಂತೇಶ್ವರ ಕಾರ್ತಿಕೋತ್ಸವ ಮತ್ತು ಆಂಜಿನೇಯ ಕಾರ್ತಿಕೋತ್ಸವವನ್ನು ಸಾಮೂಹಿಕವಾಗಿ ಆಚರಿಸುತ್ತಾರೆ.

## ಅಧ್ಯಾಯ ೪

# ದೈವಗಳ ಸ್ಥಿತ್ಯಂತರಗಳು

"ಇಂದು ಸಮಾಜ ತೀವ್ರವಾದ ಬದಲಾವಣೆಗೆಗಳಿಗೆ ಒಳಗಾಗುತ್ತಿದೆ. ವೈಜ್ಞಾನಿಕ ಸಂಶೋಧನೆ ಕೈಗಾರಿಕೀಕರಣ ನಾಗರೀಕರಣ ಇವುಗಳ ಫಲವಾಗಿ ಮಾನವನ ಆಲೋಚನೆಯ ರೀತಿ ಬದಲಾಗುತ್ತದೆ. ಹೊಸ ಬಗೆಯ ವಿಚಾರಗಳು ಬದುಕಿಗೆ ಮನುಷ್ಯ ತನ್ನನ್ನು ಒಡ್ಡಿಕೊಂಡು ಜಗತ್ತಿನ ನಾನಾ ಭಾಗಗಳ ಕಡೆ ಕಣ್ಣಾಡಿಸುತ್ತಿದ್ದಾನೆ. ಚಂದ್ರ ಗ್ರಹವನ್ನು ಕಂಡು ಬಂದಿದ್ದು ಆಗಿದೆ. ಇಂಥ ಸ್ಥಿತಿಯಲ್ಲಿ ನಮ್ಮ ಜನಪದ ಸಂಸ್ಕೃತಿಯ ರೂಪವು ಬದಲಾವಣೆಗೆ ಒಳಗಾಗುತ್ತದೆ. ಹಿಂದಿನಿಂದ ಬಂದ ಕಥೆ ಗಾದೆ ಒಗಟುಗಳ ಜೊತೆಗೆ ನಮ್ಮ ಗ್ರಾಮ ದೇವತೆಗಳು ಅವುಗಳಿಗೆ ಸಂಬಂಧಿಸಿದ ಪುರಾಣ, ಆಚರಣೆಗಳು ದಿನದಿಂದ ದಿನಕ್ಕೂ ಕಡಿಮೆಯಾಗುತ್ತಾ ಕಣ್ಮರೆಯಾಗುತ್ತಿವೆ. ಇಲ್ಲವೇ ರೂಪಾಂತರಗೊಳ್ಳುತ್ತವೆ. ಒಂದು ಕಾಲಘಟ್ಟದಲ್ಲಿ ಇವುಗಳಿಗೆ ಇದ್ದ ಸ್ವರೂಪವನ್ನು ಸಂಗ್ರಹಿಸಿ ಅವುಗಳ ಅಧ್ಯಯನಕ್ಕೆ ಒಳಪಡಿಸುವುದು ಔಚಿತ್ಯಪೂರ್ಣವಾಗಿದೆ.[೧]

ನಾವು ಇಷ್ಟು ವೈಜ್ಞಾನಿಕವಾಗಿ ಮುಂದುವರೆದರೂ ಇಂದಿನ ಯುಗದಲ್ಲಿ ದೈವತ್ವದಿಂದ ಹೊರಬರಲು ಸಾಧ್ಯವಿಲ್ಲ. ಮತ್ತು ಪ್ರಾಚೀನ ಕಾಲದಲ್ಲಿ ಜನಪದರು ದೈವತ್ವವು ಜೀವನದ ಒಂದು ಭಾಗವಾಗಿತ್ತು. ಆದರೆ ಆಧುನಿಕ ದೈವತ್ವದ ನಂಬಿಕೆ ಕಾಲಕ್ರಮೇಣ ಕಡಿಮೆಯಾಗುತ್ತದೆ. ಏಕೆ? ಎನ್ನುವ ಪ್ರಶ್ನೆ ನನ್ನದಾಗಿದೆ. ಇಲ್ಲಿ ನನಗೆ ಒಂದು ಉಲ್ಲೇಖ ನೆನಪು ಬರುತ್ತದೆ. "ದೇವರು ವರ ಕೊಟ್ಟರೂ ಪೂಜಾರಿ ವರ ಕೊಡುವುದಿಲ್ಲ" ಹಾಗಾದರೆ ಇಲ್ಲಿ ಅರ್ಚಕರೂ ಆರಾಧನೆಯೂ ಕಾರ್ಯ ಚಟುವಟಿಕೆಗಳಲ್ಲಿ ನ್ಯೂನ್ಯತೆಯೋ ಅಥವಾ ದೈವತ್ವದಲ್ಲಿ ಶಕ್ತಿ ಇಲ್ಲವೋ ಎನ್ನವುದು ಇನ್ನೊಂದು ಪ್ರಶ್ನೆ ಗರ್ಭೀಕರಿಸಿದ ಕಾಲವನ್ನು ತೆರೆದು ನೋಡಿದರೆ ಉತ್ತರ ಸಿಗಬಹುದು. ಇಲ್ಲದೇ ದ್ವಂದ್ವ ಉತ್ತರ ಸಿಗಬಹುದು, ಆದರೆ ತೆರೆದು ತೋರಿಸುವುದು ನನ್ನ ಸಂಶೋಧನೆಯ ಮುಖ್ಯ ಉದ್ದೇಶವಲ್ಲ.

ಆಧುನಕತೆ ಬೆಳೆದಂತೆಲ್ಲಾ ವಿಜ್ಞಾನವೂ ಸಾಗರೋಪಾದಿಯಲ್ಲಿ ಬೆಳೆಯುತ್ತದೆ. ಇಷ್ಟೆಲ್ಲಾ ವಿಜ್ಞಾನ ತಿಳುವಳಿಕೆಯ ಮಧ್ಯಯು ಕೂಡಾ ದೈವತ್ವದ ನೆಲೆ ನಿಂತಿರುವುದು ವಿಸ್ಮಯ. ಹಿಂದೊಂದು ದಿವಸ ಗ್ರಾಮೀಣರು ಮಾತ್ರ ದೈವತ್ವಕ್ಕೆ ಮೊರೆಯಾಗಿದ್ದರು. ಆದರೆ ಇಂದು ಕೂಡ ನಗರಗಳಲ್ಲಿ ಅದರಲ್ಲಿಯೂ ವಿದ್ಯಾವಂತರಲ್ಲಿ ದೈವತ್ವಕ್ಕೆ ಮಣಿಯುವುದೊಂದು ವಿಶೇಷ ಈ ನೆಲದಲ್ಲಿ ದೈವತ್ವವು ಗಟ್ಟಿಯಾಗಿ ಉಳಿದ ಕಾರಣ ಹಿಂದಿನ ಅನೇಕ ವಿಸ್ಮಯಗಳು ಮಾಡಿದಂತಹ ಕೆಲವೊಂದು ಘಟನೆಗಳು ಇಂದಿನ ಜನತೆಯನ್ನು ದೈವತ್ವದಡೆಗೆ ಕರೆದೊಯ್ಯದೇ ಇಷ್ಟೆಲ್ಲಾ ಏರುಪೇರುಗಳ ಮಧ್ಯ ದೈವತ್ವ ಎಂಬ ಮೂಲ

ಪರಿಕಲ್ಪನೆ ಗಟ್ಟಿಯಾಗಿ ನೆಲೆನಿಂತಿದೆ. ಇಂದಿನ ಯುವ ಪೀಳಿಗೆ ಹಿಂದಿನ ಎಲ್ಲಾ ದೈವತ್ವದ ಆಚರಣೆಗಳನ್ನು ಕಡಿಮೆ ಮಾಡುತ್ತಾ ಬಂದಿದ್ದರೂ ಕೂಡಾ ಸಂಪೂರ್ಣವಾಗಿ ದೇವರು ಎಂಬ ಪರಿಕಲ್ಪನೆ ಮೌಢ್ಯತೆಯಿಂದ ಹೊರ ಬರಲು ಸಾಧ್ಯವಾಗಿಲ್ಲ ಇದಕ್ಕೆ ಮೂಲ ಕಾರಣ. ಈ ದೇಶ ಪೂರ್ವ ಸನಾತನ ಕಾಲದಿಂದಲೂ ದೈವತ್ವಕ್ಕೆ ಮೈಗೂಡಿಸಿಕೊಂಡ ದೇಶ ವೈದಿಕೇತ್ತರ ತಾಯಿ ಪ್ರಕೃತಿ ಎನ್ನುವ ಪರಿಕಲ್ಪನೆ ದೇವರು ಎಂದು ನಂಬಿಕೊಂಡು ಬಂದಿದ್ದೇವೆ. ಆಧುನಿಕ ಜನತೆಯ ದೇವರು ತನ್ನದೇ ಆಕಾರವನ್ನು ಕೊಟ್ಟ ದೈವತ್ವದ ಕೊಂಡಿಯನ್ನು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ಎಳೆದುಕೊಂಡು ಬಂದಿದೆ.

ಆಧುನಿಕ ಯುವ ಪೀಳಿಗೆಯ ದೈವತ್ವ ಎಂಬುದು ಮೂಢನಂಬಿಕೆಯ ಪ್ರತೀಕವೆಂದು, ಹಿಂದಿನ ಸಮಾಜವನ್ನು ಎಚ್ಚರಿಸಿ ಮೌಢ್ಯತೆಯಿಂದ ಹೊರಬರಲು ವಿಜ್ಞಾನ ಮೊರೆ ಹೋಗಿ ಪವಾಡಗಳನ್ನು ಬಯಲು ಮಾಡುವ ಕೆಲಸಕ್ಕೆ ಕೈಹಾಕಿದರೂ ದೈವತ್ವದ ಹಿನ್ನೆಡೆಗೆ ಕಾರಣವಾಯಿತು. ಈ ಯುವ ಜನತೆಯ ಸರ್ವ ಸಂದೇಶವೇನೆಂದರೇ ಸಾಮಾಜಿಕ ಮೌಢ್ಯತೆಯಾದ ದೇವದಾಸಿಯಂತಹ (ದುರಿಗ್ಯೆರು ಜೋಗಮ್ಮ ಜೋಗಪ್ಪ) ಅನಿಷ್ಟ ಪದ್ಧತಿಗಳನ್ನು ದೇವರು ಎನ್ನುವ ಪರಿಕಲ್ಪನೆಯ ಮೂಲ ಕಾರಣದಿಂದ ದೈವತ್ವವನ್ನು ನಂಬಿಸಿ, ಇಡಿ ಸಮಾಜವನ್ನು ಶೋಷಣೆಯ ಶೂಲಕ್ಕೆ ಏರಿಸುವುದು ಎಂಬ ಸತ್ಯವನ್ನು ವಿಜ್ಞಾನ ಬಹಿರಂಗಪಡಿಸಿದೆ. ಇಂದೂ ಹಳ್ಳಿಗಳಲ್ಲಿಯೂ ವಿದ್ಯಾವಂತ ಸಮೂಹ ಇರುವುದರಿಂದ ದೈವತ್ವದ ಅರ್ಥ ವಿಶ್ಲೇಷಣೆಯನ್ನು ಕಟುವಾಗಿ ಟೀಕಿಸುತ್ತಾರೆ.

ಅನ್ಯದೇಶಗಳಿಗೆ ಹೋಲಿಕೆ ಕೊಟ್ಟರೆ ಭಾರತವು ಧಾರ್ಮಿಕ ನೆಲೆಗಟ್ಟಿನಲ್ಲಿ ನಿಂತ ದೇಶ ಹಾಗಾಗಿ ಈ ದೇಶ ಕಡುಬಡತನವನ್ನು ಎದುರಿಸಲು ಪ್ರಮುಖ ಕಾರಣಗಳಲ್ಲಿ ಒಂದು. ಈ ದೈವತ್ವದ ಹೆಸರಿನಲ್ಲಿ ಹಬ್ಬ ಹರಿದಿನಕ್ಕಾಗಿ ಖರ್ಚು ಮಾಡಿದ ಹಣವು ಕೂಡಾ ಈ ದೇಶದ ಆರ್ಥಿಕ ಪರಿಸ್ಥಿತಿಯ ಮೇಲೆ ದುಷ್ಪರಿಣಾಮ ಬೀರಿದೆ. ಎಂಬುದು ಇಂದಿನ ಆಧುನಿಕ ಜನರ ಅಭಿಪ್ರಾಯವಾಗಿದೆ. ಜನಪದ ದೈವಗಳಿಗೆ ಭಕ್ತಿ ಗೌರವ ಕಡಿಮೆಯಾಗುತ್ತಾ ಬಂದಿದೆ. ಗ್ರಾಮೀಣ ಸಮಾಜದಲ್ಲಿ ಜಾತಿವ್ಯವಸ್ಥೆ ಒಂದು ಪ್ರತಿಷ್ಠೆಯ ಪ್ರಶ್ನೆಯಾಗಿದೆ. ಆದರೆ ಇಲ್ಲಿ ಕೆಳವರ್ಗದ ಅರ್ಚಕರ ಪಾದ ಸ್ಪರ್ಶವನ್ನು ಮಾಡಿಕೊಳ್ಳಲಿಕ್ಕೆ ಭಕ್ತಿಪೂರ್ವಕವಾಗಿ ದೇವಿಯ ಹೊತ್ತ ಅರ್ಚಕ ಬರುವ ಹಾದಿಗೆ ಪಾದ ಸ್ಪರ್ಶಕ್ಕಾಗಿ ಮಲಗಿರುವ ಇವರಲ್ಲಿ ಇರುವ ಮೌಢ್ಯತೆಯೋ ಅಥವಾ ದೈವತ್ವದಲ್ಲಿ ಇರುವ ಗಾಢನಂಬಿಕೆಯೋ ಎನ್ನುವ ಸಂಗತಿ ಬಹಳ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ವೈಜ್ಞಾನಿಕವಾಗಿ ಮುಂದುವರೆದಾಗಲೂ ಜನಪದ ದೈವದ ಮೊರೆ ಹೋಗುತ್ತಾರೆಂದರೆ, ದೈವತ್ವಕ್ಕಿಂತ ಹೆಚ್ಚು ಯಾವುದು ಇಲ್ಲವೆನ್ನುವುದು ಜನಪದರ ನಂಬಿಕೆ. ಇದನ್ನು ಧಾರ್ಮಿಕವಾಗಿ ಹೇಳುವುದು ಧರೆಯಲ್ಲಿ ಜನಿಸಿದವರು ನಾವೆಲ್ಲಾ ಒಂದೇ ಎನ್ನುವ ಮೂಲ ಮಂತ್ರದ ಸಂಕೇತ-ಇಲ್ಲಿ ಇನ್ನೊಂದು ವಿಶೇಷವೆಂದರೆ ದುರುಗ್ಯೇರ ಊಟ ಈ ದುರುಗೆಯರು (ಜೋಗಮ್ಮ) ಇವರು ದೇವರ ಪ್ರತಿರೂಪವಿದ್ದಂತೆ. ದುರುಗ್ಯೇರಿಗೆ ನೈವೇದ್ಯ ರೂಪದಲ್ಲಿ ಹಬ್ಬದ ದಿನಗಳಲ್ಲಿ ಗುಡಿಯೊಳಗಿನ ನೆಲದ ಮೇಲೆ ಅನ್ನ, ಹಾಲು, ಹೋಳಿಗೆ ತುಪ್ಪ, ಮೊದಲಾದ ಒಂಭತ್ತು ತರಹದ ಖಾದ್ಯಗಳನ್ನು ರಾಶಿ ಮಾಡಿ ನಿರ್ಧಿಷ್ಟ

ಸಂಖ್ಯೆಯ (೭, ೯, ೧೧,) ದುರುಗ್ಯೆರಿಗೆ ಊಟ ಮಾಡಲು ಬಿಡುವರು ಇವನು ಉಂಡು ಬಿಟ್ಟ ಪ್ರಸಾದವನ್ನು ಬೇರೆ ಯಾರಾದರೂ ಊಟ ಮಾಡಬಹುದು. ಒಂದಗುಳು ಉಳಿದರೇ ಅದನ್ನು ಉಗಿಯುವರು. ಇಂದಿನ ಆಧುನಿಕ ಜಗತ್ತಿನಲ್ಲಿ ಕೆಳ ವರ್ಗದ ಅರ್ಚಕ ವಂಶದವರೂ ದುರುಗ್ಯೇರು ತಿಂದು ಬಿಟ್ಟ ಪ್ರಸಾದವನ್ನು ಇತರೇ ಎಲ್ಲಾ ವರ್ಗದವರೂ ಸ್ವೀಕರಿಸುತ್ತಾರೆ.

ಇಲ್ಲಿ ಮೌಢ್ಯತೆಯೋ ಹಾಗೂ ದೈವತ್ವ ಎನ್ನುವುದು ಗಂಭೀರವಾದ ಪ್ರಶ್ನೆಯ ಮುಂದೆ ಸರಳ ಉತ್ತರ ಆ ಗ್ರಾಮೀಣ ಜನರ ದೃಷ್ಟಿಯಲ್ಲಿ ದೈವತ್ವದ ಪರಿಕಲ್ಪನೆ ಎನ್ನುವುದು ಪ್ರತಿಷ್ಠೆಯ ಪ್ರಶ್ನೆಯಾಗಿದೆ. ಈ ಜಾತಿವ್ಯವಸ್ಥೆಯ ದೈವತ್ವದ ಮುಂದೆ ಗೌಣವಾಗುತ್ತದೆ. ಎನ್ನವುದು ಸ್ಪಷ್ಟ (ಸಂವಿದಾನ ಪರಿಚ್ಚೇದದ ೧೪ ರ ಪ್ರಕಾರ 'ಕಾನೂನಿಗೆ ಮಿಗಿಲು ಯಾರೂ ಅಲ್ಲ' ಅದರಂತೆ ಈ ಜಾತಿಯೂ ದೈವತ್ವದ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎನ್ನುವ ಮಾತು ಸತ್ಯ ಎನ್ನುವುದಾದರೆ ಅದು ಅರಸಿಕೇರಿ ದಂಡಿ ದುರುಗಮ್ಮ ಜಾತ್ರೆಯ ಮಹತ್ವದ್ದು.

ಪ್ರಾಚೀನ ಕಾಲದಿಂದಲೂ ದೈವತ್ವ ಎಂಬುದು ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡು ಬಂದಿದ್ದರೂ, ಕೂಡಾ ಇಂದಿನ ಆಧುನಿಕ ಯುಗದಲ್ಲಿ ಅರ್ಚಕರ ನಿರ್ಲಕ್ಷ್ಯದಿಂದ ಮುಗ್ಧ ಜನಗಳಿಗೆ ಧಾರ್ಮಿಕ ಮನೋಭಾವನೆಗಳಿಗೆ ವಂಚಿಸುವುದರ ಮೂಲಕವೋ ಅಥವಾ ಶ್ರೀ ಕ್ಷೇತ್ರಗಳಲ್ಲಿ ನಡೆಯುವಂತಹ ಅನ್ಯಾಯ ಅನಾಚಾರ ಅತ್ಯಚಾರ ಈ ಎಲ್ಲಾ ಕಾರಣಗಳಿಂದ ದೈವತ್ವದ ಮೂಲ ಸ್ವರೂಪ ಬದಲಾಗಿದೆ. ಜನತೆ ದೈವತ್ವದ ಬಗ್ಗೆ ನಂಬಿಕೆ ಹೋಗಲಿಕ್ಕೆ ಈ ಎಲ್ಲಾ ಅಂಶಗಳು ಕಾರಣವಾಗಬಹುದು. ಇಷ್ಟೆಲ್ಲಾ ಏರುಪೇರುಗಳ ಮಧ್ಯ ದೈವತ್ವ ಇಲ್ಲದೇ ನಮ್ಮ ಬದುಕಿಲ್ಲ ಎನ್ನುವ ಭಕ್ತರು ಉಂಟು.

ಹಬ್ಬ, ಜಾತ್ರೆಗಳು, ಸಾಮಾನ್ಯವಾಗಿ ನಂಬಿಕೆಯ ಆಧಾರದ ಮೇಲೆ ನೆಲೆಗೊಂಡು, ಸಾಂಪ್ರದಾಯಿಕ ಆಚರಣೆಗಳು ಇವೆಲ್ಲಾ ದಿಢೀರ್ ಹುಟ್ಟು ಪಡೆಯದೇ ಮನುಷ್ಯನ ಭೌಗೋಳಿಕ, ಸಾಮಾಜಿಕ ಹಿನ್ನೆಲೆಯಲ್ಲಿ ನೆಲೆಗೊಂಡ ಜಾನಪದ ಸಂಪ್ರದಾಯಗಳು. ಈ ಜನಪದ ಸಂಸ್ಕೃತಿ ಬದಲಾಗುತ್ತಿರುವ ಸಾಮಾಜಿಕ ಹಿನ್ನೆಲೆಯಲ್ಲಿ ಕಾಲ ಸಂದರ್ಭಗಳಿಗೆ ಅನುಗುಣವಾಗಿ ಅರ್ಥ ಪೂರ್ಣವಾದ ಹಿನ್ನೆಲೆಯನ್ನು ಪಡೆದುಕೊಂಡಿರುತ್ತದೆ. ಹೀಗೆ ಆಚರಣೆಯಲ್ಲಿದ್ದ ಎಷ್ಟೊ ಹಬ್ಬ ಜಾತ್ರೆಗಳು ಬದಲಾದ ರಾಜಕೀಯ, ಸಾಮಾಜಿಕ ಜೀವನದ ಜನಪದ ಮೌಲ್ಯಗಳ ಹೊಡೆತಕ್ಕೆ ಸಿಕ್ಕು ತಮ್ಮ ವೈಶಿಷ್ಟ್ಯವನ್ನು ಕಳೆದುಕೊಂಡಿದೆ. ಕೆಲವಂತೂ ಇಂದಿಗೂ ಹೇಳಲು ಹೆಸರಿಲ್ಲದಂತಾಗಿದೆ ಎನ್ನಬಹುದು.

**ಟಿಪ್ಪಣಿ**

೧. ಸಿದ್ದಲಿಂಗಯ್ಯ ಗ್ರಾಮ ದೈವ, ಪುಟ. ೧, ಮೂಲಭಾರತಿ ಪ್ರಕಾಶನ, ಬೆಂಗಳೂರು.

## ಅಧ್ಯಾಯ ೫

# ಆಧುನಿಕತೆ ಮತ್ತು ದೈವಗಳು

ಈ ದೈವತ್ವದ ಪರಿಕಲ್ಪನೆಯು ಕಾಲ ವಿಕಾಸವಾದಂತೆಲ್ಲಾ, ಮನುಷ್ಯನ ಬೌದ್ಧಿಕ ಮಟ್ಟ ಬೆಳೆದಂತೆ ವೈಜ್ಞಾನಿಕತೆಯ ಪ್ರಭಾವಕ್ಕೆ ಸಿಲುಕಿ ಆದಿಯ ಆಚರಣೆ, ಸಂಪ್ರದಾಯ, ನಂಬಿಕೆಗಳು ಮರೀಚಿಕೆಯಾಗಿ ಪ್ರಸ್ತುತ ಜಗತ್ತಿನ ಜಾಯಮಾನದ ಅಭಿರುಚಿಗೆ ತಕ್ಕಂತೆ ಸ್ಥಿತ್ಯಂತರಗೊಂಡು. ವೈರುಧ್ಯತೆಗಳನ್ನು ಕಂಡುಕೊಳ್ಳಬಹುದು. ದೈವತ್ವ ಮತ್ತು ನಂಬಿಕೆ ಆಧಾರದ ಮೇಲೆ ಮುಂದುವರಿದ ಜಗತ್ತಿನಲ್ಲಿ ಅಸ್ತಿತ್ವವನ್ನು ಪಡೆದುಕೊಳ್ಳುತ್ತೇವೆ.

ಜನಪದರು ಪೂಜಿಸುವ ದೈವಗಳ ಸಮೂಹವನ್ನು ಜನಪದ ದೈವವೆಂದು, ಮತ್ತು ಗ್ರಾಮದ ಜನರ ಇಷ್ಟ ದೈವವಾಗಿ ಮನೆ, ಮನ ಗೆದ್ದ ಗ್ರಾಮ ದೇವತೆಯಾಗಿ ರೂಪಹೊಂದಿ. ತಮ್ಮ ದೈನಂದಿನ ಕಷ್ಟಕೋಟಲೆಗಳನ್ನು ಪರಿಹರಿಸುವ ಶಕ್ತಿಯಾಗಿ, ಮತ್ತು ಗ್ರಾಮದ ಶ್ರೀ ರಕ್ಷೆಯಾಗಿ ಅವರ ಬದುಕಿನ ಒಂದು ಭಾಗವಾಗಿರುವಳು. ದೈವತ್ವ ಎನ್ನುವ ಪರಿಕಲ್ಪನೆಯು ಜನಪದ ಸೃಷ್ಟಿಯೂ ಮೂಲ "ದೈವ ಶಕ್ತಿ" ಅಥವಾ ಅಮ್ಮನ ಇಲವೇ ಈ ಧರೆಯಲ್ಲಿ ಯಾವ ಕ್ರಿಯೇಯು ಜರುಗುವುದಿಲ್ಲ. ದೇವತೆಯ ಆಕ್ರೋಶಕ್ಕೆ ತುತ್ತಾದರ ಅಥವಾ ಅಮ್ಮನ ದೃಷ್ಟಿ ನರಮನುಷ್ಯರ ಮೇಲೆ ಬಿದ್ದರೆ ಮನುಷ್ಯನ ಬದುಕು ಸರ್ವನಾಶವಾಗುತ್ತದೆ. ಎನ್ನುವ ಪರಿಕಲ್ಪನೆಯು ಜನಪದರಲ್ಲಿ ಬೇರೂರಿತ್ತು.

ಹೀಗಾಗಿ ದಿನ ಕಳೆದಂತೆ ಇದನ್ನು ಗಮನಿಸಿದ ಅರ್ಚಕ ಅಥವಾ ಪುರೋಹಿತ ವರ್ಗದ ಜನ ಪವಾಡಗಳನ್ನು ಸೃಷ್ಟಿಸಿ ದೈವತ್ವದ ಭಾವನೆಯನ್ನು ಹೆಚ್ಚಿಸಿ, ಭಯ, ಬೀತಿಯನ್ನು ಸೃಷ್ಟಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ನಿಯಮಗಳ ವ್ಯವಸ್ಥೆಯನ್ನು ರೂಪಿಸುತ್ತಾರೆ. ಮುಗ್ಧ ಮೌಢ್ಯತೆ ಹಾಗೂ ಆತ್ಮ ಸ್ಥೈರ್ಯವಿಲ್ಲದ ಜನರು ಪರಿಹಾರ ಕಂಡುಕೊಳ್ಳಲಿಕ್ಕೆ ಆದಿ ಕಾಲದಲ್ಲಿ ಪರ್ಯಾಯ ಮಾರ್ಗವಿರಲಿಲ್ಲ. ಅದಕ್ಕೆ ದೈವತ್ವದ ಮೊರೆಹೋದರೆ ನಮ್ಮ ಸಂಕಷ್ಟಗಳು ನಿವಾರಣೆಯಾಗುತ್ತವೆ ಎನ್ನುವ ನಂಬಿಕೆ ತಳಹದಿಯಾಗಿದೆ. ಈ ಕಾರಣಗಳನ್ನು ಗಮನಿಸಿದಾಗ ಆಚರಣೆ ಮತ್ತು ಸಂಪ್ರದಾಯ ಹಬ್ಬ, ಹರಿದಿನ, ಇವು ತನ್ನದೇ ಆದ ಪ್ರಾಶಸ್ತ್ಯವನ್ನು ಪಡೆದುಕೊಂಡಿವೆ.

ಮನುಷ್ಯ ಆಧುನಿಕ ಜಗತ್ತಿನಲ್ಲಿ ನಾಗರಿಕತೆ ಪಡೆದಂತೆಲ್ಲ ದೈವತ್ವ ನೆಪದಿಂದ ಮಾಡುವ ಹುನ್ನಾರವನ್ನು ಗಮನಿಸಿ, ಮನುಷ್ಯ ಕಂದಾಚಾರವನ್ನು ದಿಕ್ಕರಿಸಿ ದೈವತ್ವದ ಕಡೆಗೆ ಸ್ವಲ್ಪ ಮೊರೆ ಹೋಗುವುದನ್ನ ನಿಲ್ಲಿಸಿ ಆಚರಣೆ, ಸಂಪ್ರದಾಯ, ರೂಢಿ, ಹಬ್ಬ, ಇಂತವುಗಳ ತಾತ್ಸಾರ ಭಾವನೆಯ

ತಾಳಿ ಬದುಕನ್ನು ಉಳಿಸಿಕೊಳ್ಳಲು ಪರ್ಯಾಯ ಮಾರ್ಗಗಳು ಇರುವುದರಿಂದ ಆಧುನಿಕ ಖಾಸಗೀಕರಣ, ಉದಾರಿಕರಣದ ಪ್ರಭಾವದಿಂದ ಮನುಷ್ಯನ ಬದುಕು ಯಾಂತ್ರಿಕವಾಗಿರುವುದರಿಂದ ದೈವತ್ವದ ಪರಿಕಲ್ಪನೆಯು ಕಾರಣವೆನ್ನಬಹುದು. ಆರ್ಯ ಸಂಸ್ಕೃತಿಯು ದ್ಯೋತಕವಾಗಿ ಆಧುನಿಕ ದೈವಗಳನ್ನು ಗುರುತಿಸಬಹುದಾಗಿದೆ. ಹೀಗೆ ದೈವಗಳ ಅಧ್ಯಯನದಿಂದ ಮಾನವನ ಚರಿತ್ರೆಯುನ್ನು ಅರ್ಥಮಾಡಿಕೊಂಡಂತಾಗುತ್ತದೆ. ಭಾರತೀಯ ಸಂಸ್ಕೃತಿಯೂ ದ್ರಾವಿಡರ ಮೂಲದ್ದಾಗಿದೆ. ಆದರೆ ಆರ್ಯರ ಆಗಮನದಿಂದ ಸಂಸ್ಕೃತೀಕರಣಗೊಂಡು. ಹೀಗೆ ಬೇರ್ಪಟ್ಟ ನಂತರ ಭಿನ್ನ ಭಿನ್ನ ಸಂಸ್ಕೃತಿಗಳ ನಡುವೆ ಸಂಘರ್ಷವೇರ್ಪಟ್ಟಿರಬೇಕು. ಇದರಿಂದಾಗಿ ಆಗ ಜನಪದ ದೇವತೆಗಳ ಮೇಲೆ ಶಿಷ್ಟ ದೇವತೆಗಳ ಪ್ರಭಾವ ಶಿಷ್ಟ ಸಮುದಾಯಕ್ಕೆ ಜನಪದ ದೇವತೆಗಳ ಭಯ, ಕಾಣಿಸಿಕೊಂಡಿರಬೇಕು. ಹೀಗೆ ಹಲವಾರು ರೀತಿಯಲ್ಲಿ ಜನಪದರು ಆಧುನಿಕರಲ್ಲಿ ಭಿನ್ನತೆಯೊಂದಿಗೆ ಸೌಮ್ಯತೆಯನ್ನೊಳಗೊಂಡಿದೆ. ಇದೆಲ್ಲದರ ಪ್ರತ್ಯೇಕವಾಗಿಯೇ ಎಂಬಂತೆ ಮಾನವನು ತಾನು ದೇವತಾಕಾರ್ಯ ಮಾಡಬೇಕಾದ ಅನಿವಾರ್ಯ ಪ್ರಸಂಗ ಒದಗಿಬಂದಿದೆ. ಏಕೆಂದರೆ ದೇವರಸೇವೆ ಮಾಡಿದರೆ ಸಾಕು ಪ್ರಾಣಿಗಳ ಬೆಳವಣಿಗೆಗೆ, ತನಗೂ ಮತ್ತು ತಮ್ಮ ಮಕ್ಕಳಿಗೂ ರೋಗ ರುಜಿನಗಳು ಬರುವುದೆಂಬ ಬೀತಿಯಿಂದ ಜನಪದ ದೈವಗಳ ಕೋಪಕ್ಕೆ ಗುರಿಯಾಗಿದೆ. ಇಂದು ಸಹ ಅವುಗಳ ಆರಾಧನೆ ಕೆಲವು ದೈವಗಳಿಗೆ ನಿತ್ಯ ಇಲ್ಲದಿದ್ದರೂ ಒಂದು ವರ್ಷಕ್ಕೆ ಎರಡು ವರ್ಷಕ್ಕೊಮ್ಮೆ ಉತ್ಸವ ಜಾತ್ರೆ ಕೈಗೊಳ್ಳುವುದು ಕಂಡುಬರುತ್ತದೆ.

ಜನಪದ ದೈವಗಳು ಗ್ರಾಮಗಳಲಿ ಆಧುನಿಕ ಪ್ರಭಾವಕ್ಕೆ ಒಳಗಾಗಿ ಜನಪದ ದೈವಗಳು ಕಡೆಗಣಿಸಿ ಶಿಷ್ಟ ಪರಿಕಲ್ಪನೆಯ ದೈವಗಳಿಗೆ ಮೋರೆ ಹೋಗುತ್ತಾರೆ. ಜನಪದ ದೈವದ ಪ್ರಾಚೀನತೆ ಪುರಾತನವಾದುದು. ಹರಪ್ಪಾ ಮತ್ತು ಮಹೆಂಜೋದಾರಗಳಲ್ಲಿ ಕ್ರಿ.ಶ. ನಾಲ್ಕನೇ ಶತಮಾನದಲ್ಲಿ ದೇವತಾ ವಿಗ್ರಹ ಆರಾಧನೆಯಿತ್ತೆಂದು ಅಲ್ಲಿಯ ಶೋಧನೆ ಪ್ರಕ್ರಿಯೇ ನಂತರ ದೊರಕಿದ ಮುದ್ರೆಗಳಿಂದ ತಿಳಿದುಬರುತ್ತದೆ.

ಜನಪದ ದೈವವು ಯಾವುದೇ ಆಸ್ತಿಪಾಸ್ತಿಯಾಗಲಿ ಯಾವುದೇ ಆಡಳಿತ ಮಂಡಳಿಯಾಗಲಿ ಇರುವುದಿಲ್ಲ, ಇವು ಬಡವರ ಶಕ್ತಿಯುತವಾದಂತಹ ದೈವಗಳು, ಆದರೆ ಆಧುನಿಕ ದೈವಗಳು ಶ್ರೀಮಂತವಾಗಿರುತ್ತವೆ. ಇಲ್ಲಿ ಲಿಖಿತ ಇತಿಹಾಸವಿಲ್ಲ. ಆದರೆ ಅಲ್ಲಿ ಲಿಖೀತ ಇತಿಹಾಸವಿರುತ್ತದೆ. ಚೌಕಾಕಾರದ ಗರ್ಭಗುಡಿಗಳಿಗೆ ಮೇಲ್ಚಾವಣಿ ಅಷ್ಟೆ ಇರುತ್ತದೆ. ಆದರೆ ಆಧುನಿಕ ಜಗತ್ತಿನಲ್ಲಿರುವ ಶಿಷ್ಟ ದೈವಕ್ಕೆ ವಾಸ್ತು ಮಾದರಿಯ ಕಟ್ಟಡದೊಂದಿಗೆ ಭವ್ಯ ಶಿಲ್ಪವುಳ್ಳ ದೇವಾಲಯದ ರಚನೆಯನ್ನೊಳಗೊಂಡಿರುತ್ತದೆ. ಜನಪದ ದೈವಗಳಿಗೆ ಗರ್ಭಗುಡಿ ಪ್ರತ್ಯೇಕವಾಗಿಲ್ಲದಿದ್ದರೂ ಅಲ್ಲಿ ಕಪ್ಪದ ಕಲ್ಲು ಗೊಡೆಗೆ ಅಂಟಿಸಿ ಇಡಲಾಗಿರುತ್ತದೆ. (ಮಣ್ಣಿನ ಬಿಂದಿಗೆಯಲ್ಲಿ ತೆಂಗಿನ ಕಾಯಿ ಇಟ್ಟು ನದಿ ಅಥವಾ ಬಾವಿ ನೀರು ತುಂಬಿಟ್ಟು ಪೂಜಿಸುತ್ತಾರೆ) ಈ ರೀತಿ ಪೂಜಿಸುವುದನ್ನು ಕಾಣುತ್ತೇವೆ.

ಪ್ರಾಚೀನ ಕಾಲದಲ್ಲಿ ದೈವಗಳ ನೆಪ ಮಾಡಿಕೊಡು ಮನೋರಂಜನೆಗೆ ಹಬ್ಬ ಹರಿದಿನ ಜಾತ್ರೆ ಉತ್ಸವಗಳು ಬಹಳ ಮಾನ್ಯತೆಯನ್ನು ಪಡೆದುಕೊಂಡಿದ್ದವು. ಆದರೆ ಆಧುನಿಕ ಜಗತ್ತಿನಲ್ಲಿ ಇವುಗಳು ಪರ್ಯಾಯ ರೂಪ ತಾಳಿಕೊಂಡಿವೆ. ಮನುಷ್ಯ ಯಾಂತ್ರಿಕ ಬದುಕಿನ ನಡುವೆ ಕಾಲಘಟ್ಟದಲ್ಲಿ ಸಿಲುಕಿಕೊಂಡು

ಪ್ರಾಚೀನ ಆಚರಣೆಗಳು ದಿನ ದಿನಕ್ಕೆ ಕಡಿಮೆಯಾಗುತ್ತಿವೆ. ಈ ದೈವತ್ವದ ಪರಿಕಲ್ಪನೆಯ ನೆಪದ ಮೂಲಕ ಅರ್ಚಕ ವರ್ಗದವರು ಬಳಸಿಕೊಳ್ಳುವ ತಂತ್ರಗಳು ಇಲ್ಲಿ ಬಹಳ ಮುಖ್ಯವಾದ ಅಂಶಗಳಾಗಿವೆ.

ಆಗಿನ ಕಾಲದಲ್ಲಿ ಮಾರಕ ರೋಗಗಳಾದ ಪ್ಲೇಗನಂತಹ ಹತ್ತು ಹಲವು ರೋಗಗಳು ಬಂದಾಗ ದೇವಿಯ ಮೋರೆ ಹೋಗಿ ಮೀಸಲು ಕಟ್ಟಿಕೊಂಡರೆ ಬಂದ ರೋಗ ಪರಿಹಾರವಾಗುತ್ತದೆ. ಸದ್ಯಕ್ಕೆ ಪರ್ಯಾಯ ವ್ಯವಸ್ಥೆ ವೈದ್ಯರ ಬಳಿ ಹೋಗಿ ತಪಾಸಣೆ ಮಾಡಿಕೊಳ್ಳುತ್ತಾರೆ. ತಮ್ಮ ಮನೆಯಲ್ಲಿ ಹಸು, ಎಮ್ಮೆ ಮೇಕೆಯಂತಹ ಪ್ರಾಣಿಗಳಿಗೆ ಮಾರಕ ರೋಗ ಬಂದರೆ ದೇವಿ ಹೆಸರು ಹೇಳಿಕೊಂಡು ಮೀಸಲು ಕಟ್ಟಿಕೊಂಡರೇ ಅದರಿಂದ ದೇವಿ ರಕ್ಷಿಸುತ್ತಾಳೆ ಎನ್ನುವದು ಜನರ ನಂಬಿಕೆಯಾಗಿದೆ. ಇಂದಿನ ದಿನಗಳ ವೈದ್ಯರ ಬಳಿ ಹೋಗಿ ಪರ್ಯಾಯ ಕಂಡುಕೊಳ್ಳುತ್ತಾರೆ. ಈ ಜನಪದ ದೈವಗಳ ಮೊರೆ ಹೋಗುವುದು ನಾಗರೀಕತೆ ಬೆಳೆದಂತೆಲ್ಲಾ ಕಡಿಮೆಯಾಗುತ್ತಿದೆ.

ಮನುಷ್ಯನಲ್ಲಿ ಆಧುನಿಕತೆ ಬೆಳೆದಂತೆಲ್ಲಾ ದೈವತ್ವದ ಕಡೆಗೆ ಗಮನ ಕಡಿಮೆಯಾಗಲಿಕ್ಕೆ ಕಾರಣ. ಜನರು ಮುಖ್ಯವಾಗಿ ಕೃಷಿಯನ್ನು ಅವಲಂಭಿಸಿದ್ದರು. ಜನಪದರು ಭೂಮಿಗೆ ಉಡಿ ತುಂಬುವ ಮೊದಲು ದೇವಿಗೆ ಉಡಿ ತುಂಬಿ ತಮ್ಮ ಭೂಮಿಗೆ ಉಡಿ ತುಂಬುವ ಪದ್ಧತಿಯಿತ್ತು. ವೈಜ್ಞಾನಿಕತೆ ಬೆಳೆದಂತೆಲ್ಲಾ ಕೃಷಿಕರು ಅನುಸರಿಸುವ ಪದ್ಧತಿಗಳು ಮಾಯವಾಗುತ್ತಲಿವೆ. ಏಕೆ? ಎನ್ನುವ ಪ್ರಶ್ನೆ ನನ್ನದು ಕಾಲಘಟ್ಟದ ಪ್ರಭಾವವೋ ಆಧುನಿಕರೂ ಬುದ್ಧಿವಂತರೆನ್ನುವ ಪ್ರತಿಷ್ಟೆಯೋ ಅಥವಾ ಪ್ರಾಚೀನ ಇರುವ ದೈವತ್ವ ಪರಿಕಲ್ಪನೆಯಲ್ಲಿನ ಡೊಂಗಿತನದಿಂದ ಹೊರಬರುವುದೋ? ವಿಕಾಸ ಶೀಲವಾದ ಮನುಷ್ಯ ಬದಲಾವಣೆಯನ್ನು ಬಯಸುವುದು ಸಹಜ. ಅಲ್ಲಿಗೆ ಮೌಢ್ಯತೆಯಲ್ಲಿ ಹುರುಳಿಲ್ಲ. ಸಂಪ್ರದಾಯಗಳಿಂದ ಹೊರಬರುವುದು ಮುಖ್ಯವಾಗಿರುತ್ತದೆ ಎನ್ನುವುದು ನನ್ನ ಭಾವನೆ.

ದೈವತ್ವದ ನೆಪ ಮಾಡಿಕೊಂಡು ಪ್ರಾಣಿಗಳನ್ನು ಬಲಿಕೊಡುವದು ಅಂದಿಗೂ ಇದೆ ಹಾಗೂ ಇಂದಿಗೂ ಅದನ್ನು ಮುಂದುವರೆಸಿಕೊಂಡು ಹೋಗುತ್ತಿರುವುದನ್ನು ಕಾಣುತ್ತಿದ್ದೇವೆ. ಇಷ್ಟು ಮುಂದುವರೆದ ಜಗತ್ತಿನಲ್ಲಿ ಕಾಯಿದೆ ಕಾನೂನುಗಳಿದ್ದರೂ ಪ್ರಾಣಿಬಲಿ ಕೊಡುವ ಸಂದರ್ಭದಲ್ಲಿ ಕಾನೂನುಗಳು ಕೈಕಟ್ಟಿ ಕುಳಿತುಕೊಂಡಿರುತ್ತವೆಯೇ ಏಕೆ? ಎಂಬ ಪ್ರಶ್ನೆ ನನ್ನದು.

ದೈವತ್ವದ ಹಿನ್ನೆಲೆಯಲ್ಲಿ ಪ್ರಾಣಿಯನ್ನು ಹಿಂಸೆ ಮಾಡಿ ಅದನ್ನು ಬಲಿಕೊಡುವುದು ಪರಿಶಿಷ್ಟ ಪಂಗಡದವರಲ್ಲಿ ಹೆಚ್ಚು ಕಂಡುಬರುತ್ತದೆ. ಆಹಾರ ಪದ್ಧತಿಯ ಬಗ್ಗೆ ವಿವೇಚಿಸಿದರೆ ಪ್ರಾಚೀನರು ತಮ್ಮ ಕುಟುಂಬದವರು ಹಾಗೂ ನೆಂಟರು ಸೇರಿಕೊಂಡು ಸಾಮೂಹಿಕವಾಗಿ ಮಾಂಸದ ಭೋಜನ ಮಾಡಲು ಇಂತಹ ದೇವಿಯ ಜಾತ್ರೆಗಳು ಮಾತ್ರ ವೇದಿಕೆಗಳಾಗಿವೆ. ಇಂತಹ ಪದ್ಧತಿಯು ಇಂದು ಕೂಡಾ ಮುಂದುವರೆಯುತ್ತವೆ. ನನ್ನ ವಾದ ಮೇಲ್ವರ್ಗದವರು ಈ ಪದ್ಧತಿಯನ್ನು ಸೃಷ್ಟಿಸಿದರು ಎನ್ನುವುದಕ್ಕಿಂತ ಅವರಿಗೆ ಪ್ರೀಯವಾದ ಮಾಂಸದ ಭೋಜನವನ್ನು ಸಾಮೂಹಿಕವಾಗಿ ಮಾಡಲಿಕ್ಕೆ ಇದೊಂದು ಅವಕಾಶ ಅದಕ್ಕೆ ಇಂತಹ ಆಚರಣೆ, ಹರಕೆ, ಅವರ ಮೇಲೆ ಪ್ರಭಾವ ಬೀರಿರಬಹುದು. ಇಂದಿನ ಕಾಲದಲ್ಲಿ ಇಂತಹ ಭೋಜನಕ್ಕೆ ಪರ್ಯಾಯವಾಗಿ ಸ್ಥಳಗಳು ಯತೇಚ್ಚವಾಗಿ ಸಿಗುತ್ತದೆ.

ಆದರೆ ಅಂದು ಸಿಗುತ್ತಿರಲಿಲ್ಲ. ಪ್ರಾಚೀನ ಕಾಲದಲ್ಲಿ ಮನೋರಂಜನೆಗಾಗಿ ನಡೆಯುವ ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಬಯಲಾಟ, ನಾಟಕ, ಗೊಂಬೆಯಾಟ, ಯಕ್ಷಗಾನ, ನೋಡಿ ಮನ ತಣಿಸಿಕೊಳ್ಳುತ್ತಿದ್ದರು. ಇದು ಅವರಿಗೆ ಅನಿವಾರ್ಯವಾಗಿತ್ತು. ಆದರೆ ಆಧುನಿಕತೆಯಲ್ಲಿ ಮನೊರಂಜನೆಗಾಗಿ ಅನೇಕ ರೀತಿಯಲ್ಲಿ ಸಿಗುತ್ತಿರುವುದರಿಂದ ಇಂತಹ ಜನಪದ ದೈವತ್ವಗಳು ಮರಿಚಿಕೆಯಾಗುವುದಕ್ಕೆ ಕಾರಣವಾಗಿರಬಹುದು.

ಜೀವನದ ಹಲವಾರು ರಹಸ್ಯ ವಿಚಾರಗಳಾದ ಫಲಸಂತಾನ ನೀಡುವುದು, ಮಳೆ ತರಿಸಿ ಬೆಳೆ ನೀಡುವುದು, ಮನಸ್ಸಿಗೆ ಶಾಂತಿ ನೀಡುವುದು, ಕೋರ್ಟು ಕಛೇರಿಗಳಲ್ಲಿ ವಿವಾದಗಳನ್ನು ಬಗೆಹರಿಸುವುದು, ಬರಗಾಲ ಬರದಂತೆ ನೋಡಿಕೊಳ್ಳುವುದು, ಗ್ರಾಮದ ಜನರಲ್ಲಿ ಐಕ್ಯತೆ ಮೂಡಿಸುವುದು, ಮುಂತಾದ ಕಾರ್ಯಗಳನ್ನು ಜನಪದ ದೈವಗಳು ಯಾವುದೇ ರೂಪದಲ್ಲಿ ನೆರವಾಗುತ್ತವೆ ಎಂಬ ಪ್ರತೀತಿಯಿದೆ. ಈ ದೇವಿಯ ಕೃಪೆಯಿಂದ ಬೇಡಿಕೆಯನ್ನು ಈಡೇರಿಸುತ್ತಾಳೆ. ಎಂಬುದನ್ನು ಸಾಬೀತು ಪಡಿಸಿದ್ದಾಳೆ ಎನ್ನುವ ಭಾವನೆ ಜನಪದರಲ್ಲಿದೆ. ಆದರೆ ಆಧುನಿಕ ಈ ಪರಿಕಲ್ಪನೆಯ ಬಗ್ಗೆ ವಿಶ್ವಾಸವಿಲ್ಲವಾಗಿದೆ ಏಕೆ? ಗೊತ್ತಾ! ಈ ವಿಷಯದಲ್ಲಿ ಹುರುಳಿಲ್ಲ ಆಧುನಿಕರು ವೈದ್ಯರ ಬಳಿ ಹೋಗಿ ತಪಾಸಣೆ, ಮಾಡಿಸುವುದರಿಂದ ಫಲ ಸಂತಾನ ಸಿಗಬಹುದು. ಇದಕ್ಕೆ ಪ್ರತೀಕವಾಗಿ ಮಳೆ ತರುವ ಕಾರ್ಯವನ್ನು ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್.ಎಂ. ಕೃಷ್ಣ ಅವರ ಸರ್ಕಾರದಲ್ಲಿ ಮೋಡ ಬಿತ್ತನೆಯಿಂದ ಮಳೆ ಬರಿಸುವುದನ್ನು ಸಾಬೀತುಪಡಿಸಿದ್ದಾರೆ. ಅಂದು ಮನಸ್ಸಿಗೆ ಶಾಂತಿ ನೀಡಲು ದೈವತ್ವ ಒಂದೇ ಇತ್ತು. ಇಂದು ಅದಕ್ಕೆ ಪರ್ಯಾಯ ಮಾರ್ಗಗಳಿವೆ. ಕೋರ್ಟು ಕಛೇರಿ ವಾದ ವಿವಾದಗಳನ್ನು ಗೆಲ್ಲಲು ಪರ್‍ಯಾಯ ಮಾರ್ಗವಾಗಿ ಕೋರ್ಟುಗಳಿವೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಆಧುನಿಕರಲ್ಲಿ ದೈವತ್ವದ ಭಾವನೆ ಗೌಣವಾಗಲಿಕ್ಕೆ ಕಾರಣವೆನ್ನಬಹುದು.

ಆಧುನಿಕ ಕಾಲದಲ್ಲಿ ಶೋಧನಾ ಕಾರ್ಯ ಹೆಚ್ಚಿದಂತೆಲ್ಲಾ ವೈಜ್ಞಾನಿಕ ಅಂಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಸಾಗುತ್ತಿದ್ದಾರೆ. ಇದರಿಂದಲೇ ಮೇಲೊಂದು 'ಸ್ವರ್ಗ', 'ನರಕ' ಎನ್ನುವ ಪರಿಕಲ್ಪನೆಯಿಂದಲೂ ದೂರವಾಗುತ್ತಿರುವುದು ಸ್ಪಷ್ಟ ಅಲ್ಲದೇ ಮಾನವನು ಚಂದ್ರಲೋಕದ ಶೋಧನೆಯ ಸುಳಿವು ಪತ್ತೇ ಹಚ್ಚಿರುವುದರಿಂದ ಭಕ್ತಿಯ ಪರಾಕಾಷ್ಟತೆ ಗೌಣವಾಗುತ್ತಿದೆ. ಹಿಂದೆ ಸೂರ್ಯ ಚಂದ್ರರೇ ದೇವರು ಎನ್ನುವ ನಂಬಿಕೆಯಿತ್ತು. ಆದರೆ ಈಗಲೂ ಕೆಲವು ಗ್ರಾಮಗಳಲ್ಲಿ ಅಂದಕಾರಗಳಿಂದ ಕಳಚಿ ಆಚೆ ಬರಲು ಸಾಧ್ಯವಾಗುತ್ತಿಲ್ಲದಿರುವುದು ವ್ಯಕ್ತವಾಗುತ್ತದೆ.

ಜನಪದ ದೈವ 'ಅಮ್ಮ'ನ ಆಚರಣೆಗಳನ್ನು ಅವಲೋಕಿಸಿದರೆ, ಗ್ರಾಮೀಣರಲ್ಲಿ ಆಧುನಿಕತೆ ಇಲ್ಲದ ಪ್ರದೇಶ ಮಾತ್ರ ಇಂಥ ದೈವತ್ವದ ಮೊರೆ ಹೋಗುತ್ತಾರೆ. ಆಚರಣೆ, ಹಬ್ಬ, ಸಂಪ್ರದಾಯ, ಹರಕೆ ಇವುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ದಿನದಿಂದ ದಿನಕ್ಕೆ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳತ್ತವೆ ಏಕೆ? ಅದರಂತೆ ಅವು ಪೂರ್ಣ ಪ್ರಮಾಣದಲ್ಲಿ ಹೋಗಿಲ್ಲ. ಈ ಇನ್ನು ಹೆಚ್ಚಾಗಿ ಅಸ್ತಿತ್ವವನ್ನು ಉಳಿಸಿಕೊಂಡಿವೆ. ಹಬ್ಬ, ಜಾತ್ರೆಗಳ ಆಯಗಾರ ಪದ್ಧತಿಯು ದಿನದಿಂದ ದಿನಕ್ಕೆ ಬದಲಾವಣೆ ರೂಪವನ್ನು

ತಾಳುತ್ತದೆ. ದೇವರು ಹೊಳೆಯಿಂದ ಬರುವಾಗ ಬಲಿ ಕೊಟ್ಟ ಪದ್ಧತಿಯನ್ನು ಕೊಟ್ಟ ಪ್ರಾಣಿಯನ್ನು ತೆಗೆದುಕೊಳ್ಳುವಲ್ಲಿ ಅಯಾಗಾರರಿಗೆ ಕೊಡುವುದು ಬದಲಾವಣೆಯಾಗಿದೆ. ಇನ್ನೂ ಕೆಲವು ದಿನಗಳು ಹೋದರೇ ಇನ್ನೂ ಬದಲಾಣೆಗಳಾಗುವ ಸಾದ್ಯತೆಗಳಿವೆ.

ಮನುಷ್ಯನಲ್ಲಿ ಆಧುನಿಕತೆ ಬೆಳೆದಂತೆ ಅಂದತ್ವದಿಂದ ಹೊರ ಬರುವಂತ ಪ್ರಯತ್ನ ಮಾಡುತ್ತಾನೆ. ಬದುಕಿನ ಅನೇಕ ಆಯಾಮಗಳನ್ನು ಕಂಡುಕೊಳ್ಳುವಂತ ಪ್ರಜ್ಞಾವಂತ ಮನಷ್ಯ ಸ್ಥಿತಿಯನ್ನು ಕಳೆದುಕೊಂಡು ಪ್ರಾಚೀನ ಸಮಾಜದಲ್ಲಿ ನಿರ್ಮಾಣ ಮಾಡಿದ ಅನೇಕ ನಿರ್ಬಂಧ ಮೀರಿ ಬರುವ ಪ್ರಯತ್ನ ಮಾಡುತ್ತಾನೆ ವೈಜ್ಞಾನಿಕ ಶೋಧನೆ ಜೊತೆಗೆ ಬದುಕಿನ ಎಲ್ಲಾ ಮಗ್ಗಲುಗಳ ಓರೆಗೆ ಹಚ್ಚುವಂತ ಮನಸ್ಥಿತಿಯನ್ನು ರೂಪಿಸಿಕೊಂಡು ದೈವತ್ವ ಪರಿಕಲ್ಪನೆಯನ್ನು ಅರ್ಥರಹಿತ ಆಡಂಬರದ ಅಥವಾ ಡೊಂಗಿ ಭಕ್ತಿ ಬಿಟ್ಟ ವಾಸ್ತವಿಕ ನೆಲೆಯ ಬದುಕನ್ನು ಒಗ್ಗಿಸುವಂತ ಪ್ರಯತ್ನ ಮಾಡುತ್ತಾನೆ. ಸಮಾಜದ ಐಕ್ಯತೆಗೆ ಸಾಮರಸ್ಯ ಈ ದೇವರು ದೈವ ಎನ್ನುವ ಪರಿಕಲ್ಪನೆ ರೂಪಿಸುವುದು ಸೂಕ್ತ. ಆಡಂಭರದ ನಿರ್ಬಂಧ ಏರಿ ಮುಗ್ಧ ಜನರ ಪಾಲಿಗೆ ದೇವರ ಹೆಸರಿನಲ್ಲಿ ಶೋಷಣೆಗೆ ವಸ್ತುವಾಗಿ ಬಳಸಿಕೊಂಡು. ಮುಗ್ದ ಅಮಾಯಕ ಜನರ ಪಾಲಿಗೆ ಇಲ್ಲವಾಗಿದೆ. ಮಾನವೀಯ ಮೌಲ್ಯಗಳನ್ನು ಮರೆಯುವಂತ ವ್ಯವಸ್ಥೆಯನ್ನು ರೂಪಿಸಿಕೊಂಡ ಈ ದೈವ ಎಲ್ಲಾ ಕಾಲಕ್ಕೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತದೆ. ಆದರೆ ಅರ್ಚಕನು ಸರ್ವಾಧಿಕಾರಿ ಧೋರಣೆಯನ್ನು ಅನುಸರಿಸಿ, ದೈವತ್ವವು ಜನಸಾಮಾನ್ಯರ ಪಾಲಿಗೆ ಮಾರಕವಾಗಬಹುದು.

ಆಧುನಿಕ ಯುಗದ ಪ್ರಭಾವ ಅರಸಿಕೇರಿ ಗ್ರಾಮದ ಮೇಲೆ ಕಡಿಮೆಯಾದ್ದರಿಂದ ಗ್ರಾಮದೇವತೆಗಳು ಆಚರಣೆಗಳು ಹೆಚ್ಚು ಕಂಡುಬರುತ್ತದೆ. ಹಳ್ಳಿಗಳಲ್ಲಿ ಕೆಳವರ್ಗ ಜನರು ಹೆಚ್ಚು ಇರುವುದರಿಂದ ಗ್ರಾಮ ದೇವತೆಯ ಗುಡಿ ನಾಶ ಮಾಡಿದರೇ ಪಾಪ ಬರುವುದೆಂಬ ಪರಿಕಲ್ಪನೆಯಿದೆ. ಪರಿಶಿಷ್ಟರ ಸಂಖ್ಯೆ ಹೆಚ್ಚಾಗಿರುವುದರಿಂದ ಹಾಗೂ ಅನಕ್ಷರಸ್ಥರ ಪ್ರಮಾಣ ಹೆಚ್ಚಾಗಿರುವುದರಿಂದ ಈ ಭಾಗದಲ್ಲಿ ಗ್ರಾಮ ದೈವಗಳ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ.

(ಅರಸಿಕೇರಿಯ ಜಾತ್ರೆಯಲ್ಲಿ ದುರ್ಗಿಯರು ಗ್ರಾಮ ದೈವಗಳ ಅಥವಾ ಈ ದೇವಿಯ ಹೆಸರಿನಲ್ಲಿ ಒಪ್ಪತ್ತಿನಿಂದ ದೇವಿಯನ್ನು ಉಪಾಸನೆ ಮಾಡಿದ ನಂತರ ಈ ದುರ್ಗಿಯರು ಪ್ರಸಾದ ಸ್ವೀಕರಿಸಿದ ನಂತರ ಜಾತ್ರೆಗೆ ಬಂದ ಸದ್ಭಕ್ತರು ಈ ಜಾತಿ ವ್ಯವಸ್ಥೆಯಿಂದ ಮೀರಿ ಸರ್ವರು ಸಾಮೂಹಿಕವಾಗಿ ಪ್ರಸಾದವನ್ನು ಸ್ವೀಕರಿಸಿ ನಂತರ ಇಲ್ಲಿ ಎಲ್ಲರೂ ಸಮಾನರು ಎಂದು ಭಾವಿಸಿ. ಸರ್ವರ ಐಕ್ಯತೆಯನ್ನು ಈ ಜಾತ್ರೆಯು ಇಂದಿಗೂ ನಿದರ್ಶನ.) ಆಧುನಿಕ ನಾಗರಿಕತೆಯ ತರ್ಕ ಒಂದು ಏಕರೂಪಿ ಜೀವನ ಕ್ರಮವನ್ನು ರೂಪಿಸುವುದಾಗಿದೆ. ಹಳೆಯ ಜ್ಞಾನದ ವ್ಯವಸ್ಥೆಗಳು ಭಾವನಾ ವಲಯಗಳು ತೀವ್ರ ರೀತಿಯ ಹಿಂಸೆಯನ್ನು ಅನುಭವಿಸಿ ಕಣ್ಮರೆಯಾಗುತ್ತದೆ. ಗ್ರಾಮ ದೇವತೆಗಳು ಶೀಘ್ರವಾಗಿ ಕಣ್ಮರೆಯಾಗುತ್ತಿರುವುದನ್ನು ಕೂಡಾ ಈ ನಾಗರಿಕತೆಯ ತರ್ಕದಲ್ಲೇ ನೊಡಬೇಕಾಗಿದೆ. ಆಧುನಿಕ ಬಂಡವಾಳಶಾಹಿ ನಾಗರಿಕತೆಗಿಂತ ಭಿನ್ನವಾದ ಲೋಕಗ್ರಹಿಕೆ ನಂಬಿಕೆ ಆಚರಣಾ ಕ್ರಮವನ್ನು ನಿರ್ದಯವಾಗಿ ಹೊಸಕಿ ಹಾಕುತ್ತದೆ. ಆಧುನೀಕರಣದ ಸಂದರ್ಭದಲ್ಲಿ ಗ್ರಾಮದೇವತಾ ವ್ಯವಸ್ಥೆ ಸೂಚಿಸುತ್ತಿರುವ ಮೌಲ್ಯಗಳು ಮತ್ತು ಎದುರಿಸುತ್ತಿರುವ ಸಮಸ್ಯೆಗಳು.

ಗ್ರಾಮ ದೇವತೆಗಳು ಸ್ತ್ರೀ ಚೈತನ್ಯ ಶಕ್ತಿಯ ಆರಾಧನೆ ಎಂದರೆ ತಪ್ಪಾಗಲಾರದು. ಕೆಳವರ್ಗದ ಲೋಕವನ್ನು ನೋಡುವ ಕ್ರಮವನ್ನು ಇವು ಸೂಚಿಸುತ್ತವೆ. ಸ್ಥಳೀಯ ಮೂಲದಿಂದ ಬಂದ ಈ ಗ್ರಾಮ ದೇವತೆಗಳ ಅರ್ಚಕರು ಸಾಮಾನ್ಯವಾಗಿ ಕೆಳಜಾತಿಗೆ ಸೇರಿದವರಾಗಿರುತ್ತಾರೆ. ಆದ್ದರಿಂದ ಗ್ರಾಮ ದೇವತೆಗಳು ಇಷ್ಟ ಪಡುವ ಆಹಾರಗಳು ಕೆಳವರ್ಗದ ಆಹಾರ ಪದ್ದತಿಗೆ ಸಂಬಂಧಿಸಿದ್ದಾಗಿರುತ್ತದೆ. ಆಯಾ ಜನವರ್ಗದ ಭಾಷೆ ಆಗ ಬಳಕೆಯಾಗಿರುವುದನ್ನು ಕಾಣಬಹುದು.

ಗ್ರಾಮ ದೇವತೆಗಳು ತಮ್ಮ ಸಮಾಜದ ವೈದಿಕೇತರ ಜನ ವರ್ಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಗ್ರಾಮ ದೇವತೆಯು ಪರಿಕಲ್ಪನೆ ಮೂರು ನೆಲೆಗಳಲ್ಲಿ ಕ್ರಿಯಾಶೀಲವಾಗಿದೆ. ಅವು ಮನುಷ್ಯ ಮತ್ತು ಸಮಾಜ ಮನುಷ್ಯ ಮತ್ತು ಮನುಷ್ಯ, ಮನುಷ್ಯ ಮತ್ತು ನಿಸರ್ಗ ಸಂಬಂಧ ನೆಲೆಯಲ್ಲಿ ಗ್ರಾಮ ದೇವತೆಯ ಪರಿಕಲ್ಪನೆ ವರ್ಣ ಸಂಕರಣದ ಮೇಲೆ ಹೇರಿದ ನಿಷೇಧವಾಗಿ ಕಾಣುತ್ತವೆ. ಮನುಷ್ಯ ಮತ್ತು ನಿಸರ್ಗದ ಮೇಲೆ ಗ್ರಾಮ ದೇವತೆಯ ಪರಿಕಲ್ಪನೆ ಪ್ರಕೃತಿಯು ವಿವಿಧ ವ್ಯಾಪಕಗಳ ಆರಾಧನೆಯಾಗಿವೆ.

ಇವತ್ತಿನ ಆಧುನಿಕ ಸಂದರ್ಭದಲ್ಲಿ ಗ್ರಾಮ ದೇವತೆಗಳ ಉಳಿವು ನಮ್ಮ ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು. ಇಲ್ಲಿ ಮುಖ್ಯವಾಗಿ ನಾಗರೀಕತೆಯು ಬದಲಾದಂತೆ ಸಂಸ್ಕೃತಿಗಳು ಚಲನಗೊಳ್ಳುತ್ತವೆ. ಸಂಸ್ಕೃತಿಗಳು ಬದಲಾದಂತೆ ಜನರಲ್ಲಿ ನಂಬಿಕೆ, ಸಂಪ್ರದಾಯಗಳು ಬದಲಾಗುವುದು ಸೃಷ್ಟಿಯ ಸಹಜ ಗುಣ. ಆದರೂ ಮೂಲಭೂತವಾಗಿ ಜೀವನದಲ್ಲಿ ಅಳವಡಿಸಿಕೊಂಡಿರುವಂತಹ ಅಂಶಗಳು ಮಾತ್ರ ಹೋಗುವುದಿಲ್ಲ ಎನ್ನಬಹುದು.

ಹಳ್ಳಿಗಳಲ್ಲಿ ವಾಸಿಸುವ ಮುಗ್ದ ಜನರು ಅತಿ ಭಕ್ತಿಯಿಂದ ದೇವ ದೇವತೆಗಳನ್ನು ಆರಾಧಿಸುವುದು ಕಂಡುಬರುತ್ತದೆ. ಅಲ್ಲದೇ ಗ್ರಾಮ ದೇವತೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವುದನ್ನು ಕಾಣುತ್ತೇವೆ. ಇಂದಿಗೂ ನಮ್ಮ ಹಳ್ಳಿಗಳಲ್ಲಿ ಮಂಗಳವಾರ ಶುಕ್ರವಾರ ಗ್ರಾಮದೇವತೆಯ ವಾರಗಳೆಂದು ವಿಶೇಷ ಪೂಜೆಯನ್ನು ಜರುಗಿಸುವರು. ಭೂಮಿಗೆ ಬೀಜ ಬಿತ್ತುವ ಪೂರ್ವದಲ್ಲಿ ದೇವಿಯ ಉಡಿಯನ್ನು ತುಂಬುವುದು ಈ ಎಲ್ಲಾ ಅಂಶಗಳು ಇಂದಿನ ಆಧುನಿಕ ಕಾಲದಲ್ಲಿಯೂ ಹಳ್ಳಿಯ ಜನರಲ್ಲಿ ದೈವಿ ಶಕ್ತಿಯ ಪ್ರಭಾವವನ್ನು ತೋರಿಸುತ್ತದೆ.

ಈ ಗ್ರಾಮ ದೇವತೆಗಳು ವ್ಯಯಕ್ತಿಕವಾದ ಮಾನಸಿಕ ನೆಮ್ಮದಿಯನ್ನು ನೀಡುವುದರ ಜೊತೆಗೆ ಸಮುದಾಯದ ಸಂಘಟನಾ ಕಾರ್ಯವನ್ನು ಸಹ ನಿರ್ವಹಿಸುತ್ತದೆ. ಗ್ರಾಮದೇವತೆಗೆ ಬೇಕಾದಂತಹ ಅಥವಾ ಸೃಷ್ಟಿಗೆ ಬೇಕಾದಂತಹ ಸಾಮೂಹಿಕ ಕಾರ್ಯವನ್ನು ಸಂಘಟಿಸುವುದು. ಈ ಕಾರ್ಯವನ್ನು ಗ್ರಾಮ ದೇವತೆಯ ಸಮ್ಮುಖದಲ್ಲಿ ಬಗೆಹರಿಸಿಕೊಳ್ಳಲು ಪ್ರಯತ್ನಿಸುವರು. ಹಾಗಾಗಿ ಗ್ರಾಮ ದೇವತೆಗಳು ಇಲ್ಲದಂತಹ ಊರುಗಳಿಲ್ಲ. ಆ ಗ್ರಾಮದ ವೈಭವಿಕರಣಕ್ಕೆ ಮತ್ತು ಗ್ರಾಮದ ಸಾಂಕೇತಿಕರಣಕ್ಕೆ ಮಾನವನನ್ನು ಕೂಡಾ ಗ್ರಾಮದಲ್ಲಿ ದೈವತ್ವದ ಮಟ್ಟಕ್ಕೇರಿಸಿ ಅವನನ್ನು ಪೂಜಿಸುವುದನ್ನ ನೋಡಿದರೆ ಜನರ ಮನಸ್ಸಿನಿಂದ ಇವತ್ತಿಗೂ ಗ್ರಾಮ ದೇವತೆಗಳ ಬಗೆಗೆ ನಂಬಿಕೆ ಸಂಪ್ರದಾಯಗಳು ಇನ್ನೂ ನಿರ್ಗಮಿಸಿಲ್ಲ ಎಂದು ಸ್ಪಷ್ಟವಾಗಿ ಹೇಳಬಹುದು.

# ಅಧ್ಯಾಯ ೬

# ಉಪಸಂಹಾರ

ಕರ್ನಾಟಕದ ಇತಿಹಾಸವನ್ನು ಅವಲೋಕಿಸಿದಾಗ ಮಧ್ಯ ಕರ್ನಾಟಕವು ಐತಿಹಾಸಿಕ ಮಹತ್ವ ಪಡೆದ ಪ್ರಾಚೀನ ನಾಡಾಗಿದೆ. ಸಾಮ್ರಾಜ್ಯಗಳ ನಿರ್ಮಾಣ ಮತ್ತು ಅವುಗಳ ವ್ಯವಸ್ಥೆಯಲ್ಲಿ ಧಾರ್ಮಿಕದೃಷ್ಟಿ, ಸಾಹಿತ್ಯ ದೃಷ್ಟಿ ಕಲಾದೃಷ್ಟಿ ಆದಿಯಾಗಿ ಕಲೋಪಾಸನೆಯು ಹೀಗೆ ಜೀವನದ ಎಲ್ಲಾ ರಂಗಗಳಲ್ಲಿಯೂ ಮಧ್ಯ ಕರ್ನಾಟಕವು ಸಾಧನೆ ಸಾರ್ಥಕತೆಯನ್ನು ಪಡೆದಿದೆ.

ಈ ಪ್ರಾದೇಶಿಕ ಗ್ರಾಮದೈವಗಳು ಹಲವು ಆಯಾಮಗಳನ್ನು ಈ ಅಧ್ಯಯನದಿಂದ ನೋಡಬಹುದಾಗಿದೆ. ಆದರೆ ಅರಸಿಕೇರಿ ಗ್ರಾಮದೇವಿಯ ದೈವತ್ವದ ಬಗೆಗೆ ಇಲ್ಲಿ ಅಧ್ಯಯನಕಾರನ ತೀರ್ಮಾನಗಳು ಅಂತಿಮವಲ್ಲ, ದೈವತ್ವ ಎನ್ನುವ ಪರಿಕಲ್ಪನೆ ಮನುಷ್ಯನ ದೃಷ್ಟಿಯಲ್ಲಿ ಅಗೋಚರವಾದ ಶಕ್ತಿಯಾಗಿದೆ. ಈ ದೈವಶಕ್ತಿ ಶತ ಶತಮಾನಗಳಿಂದಲೂ ಜನಸಾಮಾನ್ಯರ ಬದುಕಿನಲ್ಲಿ ಬೀಡುಬಿಟ್ಟು ವಿಸ್ತಾರವಾಗಿ ಬೆಳೆದು ಅದರ ನೆರಳಿನಂಚಿನ ವ್ಯವಸ್ಥೆಯಲ್ಲಿ ನಡೆದು ಬಂದಿರುವ ಅರಸಿಕೇರಿ ಜನಪದ ಜೀವಂತ ದೈವಗಳು ಸಂಸ್ಕೃತಿ ಆಚರಣೆ, ಸಂಪ್ರದಾಯಗಳನ್ನು ಸಂಪೂರ್ಣವಾಗಿ ವಿವೇಚಿಸಿ ಕೊನೆ ಮುಟ್ಟಿಸುವುದು ಕೊನೆಯಾಗದ ಕೆಲಸವೆ ಸರಿ. ಎಕೆಂದರೆ ಅರಸಿಕೇರಿ ಪ್ರಾದೇಶಿಕ ಜನಪದರು ನಂಬಿರುವ ದೈವಶಕ್ತಿ ಒಂದು ಸನಾತನ ವೃಕ್ಷವಿದ್ದಂತೆ, ಆದರೆ ಅದು ನಿತ್ಯಚೇತನ ಆಧುನಿಕ ಜಗತ್ತಿನ ಪ್ರಭಾವದಿಂದ ವಿಕಾಸ ಹೊಂದುತ್ತಾ ಪ್ರಾಚೀನ ಪರಂಪರೆಯನ್ನು ಚಿತ್ರಿಸಲು ಸ್ವಲ್ಪ ಪ್ರಯತ್ನ ನಾನಿಲ್ಲಿ ಮಾಡಿದ್ದೇನೆ.

ಈ ಪ್ರಾದೇಶಿಕ ಭಾಗದಲ್ಲಿ ಅನೇಕ ಸಮುದಾಯಗಳು ಈ ದೈವವನ್ನು ಆರಾಧಿಸುವ ಬಗೆ ಬಹು ವೈವಿಧ್ಯಮಯವಾದುದು. ಸಮಾಜದ ಐಕ್ಯತೆಯು ಸಾಂಕೇತಿಕವಾಗಿ ಈ ನೆಲ ಧಾರ್ಮಿಕತ್ವ ಮನೋಭಾವದಿಂದ ಸಾಮರಸ್ಯದ ಬದುಕಿನಲ್ಲಿ ಜಾಯಮಾನವನ್ನು ಕಂಡುಕೊಳ್ಳುವ ಸಮಾಜದ ತೀವ್ರ ಬದಲಾವಣೆಗೆ ಒಳಗಾಗುತ್ತದೆ. ವೈಜ್ಞಾನಿಕ ಸಂಶೋಧನೆ ಕೈಗಾರಿಕೀಕರಣ, ನಾಗರೀಕರಣ ಇವುಗಳ ಫಲವಾಗಿ ಮಾನವನ ಆಲೋಚನೆಯ ರೀತಿ ಬದಲಾಗುತ್ತದೆ. ಹೊಸ ಬಗೆಯ ವಿಚಾರಗಳ ಬದುಕಿಗೆ ಮನುಷ್ಯ ತನ್ನನ್ನು ಒಡ್ಡಿಕೊಂಡು ಜಗತ್ತಿನ ನಾನಾ ಭಾಗಗಳ ಕಡೆಗೆ ಕಾಣಿಸಿದ್ದಾನೆ. ಈ ಜನಪದ ದೇವತೆಗಳಲ್ಲಿ ಗ್ರಾಮದೇವತೆಗಳು, ಕುಲದೇವತೆಗಳು, ಬುಡಕಟ್ಟು ದೇವತೆಗಳು, ಪುರಾಣಕಾಲಿನ ದೇವತೆಗಳು ಹಾಗೂ ಇತರ ದೇವತೆಗಳು ಸೇರುತ್ತವೆ. ಈ ಜನಪದ ದೇವತೆಗಳು ಮತ್ತು ಶಿಷ್ಟ

ದೇವತೆಗಳ ಕೆಲವು ವಿಷಯಗಳಲ್ಲಿ ಸಾಮ್ಯವಿರುವಂತೆ ಅನೇಕ ಆಚಾರ ವಿಚಾರಗಳಲ್ಲಿ ಭಿನ್ನತೆ ಇರುವುದನ್ನು ಕಾಣಬಹುದಾಗಿದೆ.

ದ್ರಾವಿಡ ಸಂಸ್ಕೃತಿಯ ಮೂಲದಿಂದ ಬಂದ ದೈವಗಳನ್ನು ಜನಪದ ದೇವತೆಗಳೆಂದು ಆರ್ಯ ಸಂಸ್ಕೃತಿಯ ಮೂಲದಿಂದ ಬಂದ ದೈವಗಳನ್ನು ಶಿಷ್ಟದೈವಗಳೆಂದು ವರ್ಗೀಕರಿಸಬಹುದಾಗಿದೆ. ಎರಡು ಸಂಸ್ಕೃತಿಗಳಲ್ಲಿ ನಿಯಮಾಚರಣೆಗಳನ್ನು ಪೂಜಾ ವಿಧಾನಗಳಲ್ಲಿ ಜಾತ್ರಾ ಉತ್ಸವವನ್ನು ಕಾಣಬಹುದಾಗಿದೆ. ಸಂಪ್ರಬಂಧವನ್ನು ರಚಿಸುವ ಸಂದರ್ಭದಲ್ಲಿ ಸಿಗುವ ಆಕರಗಳನ್ನು ತರ್ಕಬದ್ಧವಾಗಿ ಬಳಸಿಕೊಂಡು ಸತ್ಯವನ್ನು ಅನ್ವೇಷಿಸುವುದು ಒಂದು ಕ್ರಿಯೆಯಾಗಿರುತ್ತದೆ. ಇಲ್ಲಿ ದೊರಕುವ ಪ್ರಾಥಮಿಕ ಅಂಶಗಳು ಪ್ರಕಟಣೆಗೆ ನೆರವಾಗಿ ಕ್ಷೇತ್ರಕಾರ್ಯವನ್ನು ಆಯ್ದುಕೊಂಡು ಜನರ ಬಾಯಿಂದ ಹರಿದು ಕಥೆ, ಹಾಡುಗಳ ಮುಖಾಂತರ ಊಹೆಯ ಬೆಳಕನ್ನು ಚೆಲ್ಲಬಹುದು.

ಕ್ಷೇತ್ರಕಾರ್ಯಕ್ಕನುಗುಣವಾಗಿ ಈ ಸಂಪ್ರಬಂಧವನ್ನು ಅಧ್ಯಯನಗಳಿಂದ ವಿವೇಚಿಸಿ ಸ್ವರೂಪ ಮತ್ತು ಮಹತ್ವವನ್ನು ಅಡಕಗೊಳಿಸಬೇಕಾಗಿದೆ. ನಂತರ ಅಧ್ಯಾಯ ೧ರಲ್ಲಿ ಅರಸಿಕೇರಿಯ ಚಾರಿತ್ರಿಕ ನೋಟ ಈ ಪದ ನಿಷ್ಪತ್ತಿಯಿಂದ ಹಿಡಿದು ಗ್ರಾಮ ಪರಿಸರವನ್ನು ಮಂಡಿಸಲಾಗಿದೆ. ಹಾಗೆಯೇ ಭೌಗೋಳಿಕ, ಸಾಂಸ್ಕೃತಿಕತೆ, ಸಾಮಾಜಿಕತೆ, ಶೈಕ್ಷಣಿಕ ಅವಲೋಕನ, ರಾಜಕೀಯ ನೆಲೆ ಅಂಶಗಳ ವಿವರಣೆ ನೀಡಲಾಗಿದೆ. ನಂತರ ಎರಡನೇಯ ಅಧ್ಯಾಯನದಲ್ಲಿ ದಂಡಿನ ದುರುಗಮ್ಮ ಪರಿಕಲ್ಪನೆಯಲ್ಲಿ ಪದನಿಷ್ಪತ್ತಿ ಐತಿಹ್ಯ, ದೈವಗಳ ಮೂಲ, ಪೂಜಾ ವಿಧಾನ, ಸ್ತ್ರೀದೈವಗಳು ಮತ್ತು ಪುರುಷದೈವಗಳು, ಈ ಎಲ್ಲಾ ಅಂಶಗಳನ್ನೊಳಗೊಂಡಿದೆ .ಅಧ್ಯಾಯ ೩ರಲ್ಲಿ ಆಚರಣೆ, ಹಬ್ಬ, ಜಾತ್ರೆ, ಇತ್ಯಾದಿ ವಿಷಯಗಳನ್ನೊಳಗೊಂಡಿದೆ. ಅಧ್ಯಾಯ ೪ರಲ್ಲಿ ದೈವಗಳ ಸ್ಥಿತ್ಯಂತರ ವಿಷಯವನ್ನು ಒಳಗೊಂಡಿದೆ. ಅಧ್ಯಾಯ ೫ರಲ್ಲಿ ಆಧುನಿಕತೆ ಮತ್ತು ದೈವಗಳು ಪ್ರಸ್ತುತ ದಿನಗಳ ವಿಷಯಗಳನ್ನೊಳಗೊಂಡಿದೆ. ಮತ್ತು ಅನುಬಂಧದಲ್ಲಿ ಹಾಡುಗಳಿವೆ.

ಒಟ್ಟಾರೆಯಾಗಿ ಜನಪದ ದೈವಗಳು ಆಧುನಿಕ ಪ್ರಭಾವಗಳ ಕಾಲಗರ್ಭದಲ್ಲಿ ಅಡಗಿಕೊಳ್ಳುವುದರ ಜೊತೆಗೆ ತನ್ನ ಆಚರಣೆ, ನಂಬಿಕೆ, ಸಂಪ್ರದಾಯ, ಪೂಜಾವಿಧಿಗಳು ಮತ್ತು ಜನಪದರಲ್ಲಿರುವ ಮೌಲ್ಯಯುಳ್ಳ ಬದುಕಿನ ವ್ಯವಸ್ಥೆಯು ಮರಿಚಿಕೆಯಾಗಿ. ಪ್ರಸ್ತುತ ದಿನಗಳಲ್ಲಿ ದೈವತ್ವದ ಮೂಲಕ ಗ್ರಾಮದ ಚರಿತ್ರೆಯನ್ನು ಕಟ್ಟುವುದರ ಜೊತೆಗೆ ದೈವತ್ವದ ನೆಪದಿಂದ ಡಾಂಭಿಕತೆ ಕೆಲವು ವಿಷಯಗಳನ್ನು ಸೂಕ್ಷ್ಮವಾಗಿ ವಿಶ್ಲೇಸಿಸಲು ಪ್ರಯತ್ನಿಸಿರುತ್ತೇನೆ.

ಪ್ರಸ್ತುತ ಖಾಸಗಿಕರಣದ ಪ್ರಭಾವದಿಂದ ಹಳ್ಳಿಯಿಂದ ದಿಲ್ಲಿಯವರೆಗೆ ಸರ್ವರ ಜೀವನದ ಕ್ರಮವನ್ನು ಬದಲಾಯಿಸಲು ಯತ್ನಿಸುತ್ತಾ, ಇಂತಹ ಸಂಕ್ರಮಣದ ಸ್ಥಿತಿಯಲ್ಲಿ ದಂಡಿ ದುರುಗಮ್ಮನ ಸಂಸ್ಕೃತಿಯು ಜೀವಾಳವಾಗಿ ಜನಪದರ ಆಶಯವಾಗಿ ನಾಗರೀಕತೆಯ ಬದುಕಿನಲ್ಲಿ ಬರ್ಬರತೆಯ ಗಾಯವನ್ನು ಮಾಯಿಸುವ ಶಕ್ತಿಯಾಗಿದ್ದಾಳೆ. ಆಕೆ ಕೇವಲ ಶಕ್ತಿ ಮಾತ್ರವಾಗಿರದೇ ಎಲ್ಲಾ ದುಷ್ಟಶಕ್ತಿಗೂ ಪ್ರತಿರೋಧ ಸಂಕೇತವಾಗಿದ್ದಾಳೆ.

ಇದು ನನ್ನ ಸಂಶೋಧನಾ ಅಧ್ಯಯನದ ಪ್ರತಿಫಲವೆಂದು ಹೇಳಿಕೊಳ್ಳುವುದರಲ್ಲಿ ನನಗೆ ಯಾವ ಸಂಕೋಚವಿಲ್ಲ. ಕ್ಷೇತ್ರಕಾರ್ಯದ ಶೋಧನೆಯು ನಿಂತ ನೀರಲ್ಲ ನಿರಂತರ ಹರಿಯುತ್ತಲೇ ಇರುತ್ತದೆ. ನಾನು ಆಯ್ಕೆ ಮಾಡಿಕೊಂಡ ವಿಷಯ "ದಂಡಿ ದುರುಗಮ್ಮನ ಸಾಂಸ್ಕೃತಿಕ ಅಧ್ಯಯನ" ಕುರಿತಾದ ನನ್ನ ಅಧ್ಯಯನವು ನನ್ನ ಮಟ್ಟಿಗೆ ಕೊನೆಯಾಗದಿದ್ದರೂ ಹಾಗೆಯೇ ಅದನ್ನು ಇನ್ನೊಬ್ಬ ಸಂಶೋಧಕ ಮುಂದುವರಿಸಬಹುದು. ಹೀಗೆ ಅರಸಿಕೇರಿ ಗ್ರಾಮಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದಲ್ಲಿ ಕ್ರೋಢೀಕರಿಸಿದ ಮಾಹಿತಿಯನ್ನು ತಿಳಿಸುವ ಪ್ರಯತ್ನವನ್ನು ನಾನಿಲ್ಲಿ ಮಾಡಿದ್ದೇನೆ ಇದೇ ಕೊನೆಯಲ್ಲ. ಏಕೆಂದರೆ ಸಂಶೋಧನಾ ಅಧ್ಯಯನ ನಿರಂತರ ಪ್ರವಾಹಿಸುತ್ತರುವ ನೀರಿನಂತೆ ಎಂಬುದು ನನ್ನ ತಿಳುವಳಿಕೆ.

# ಅನುಬಂಧಗಳು

೧. ಹಾಡುಗಳು

೨. ವಕ್ತೃ ವಿವರ

೩. ಅರ್ಚಕರ ವಂಶಾವಳಿ

೪. ಆಕರ ಗ್ರಂಥಗಳು

೫. ಛಾಯಾಚಿತ್ರಗಳು

# ೧. ಹಾಡುಗಳು

ರನ್ನದ ಒಳಕ್ವೋಟೆ
ಚಿನ್ನದ ಹೊರಕ್ವೋಟೆ
ರನ್ನ ಕೆತ್ತಿಸಿದ ನಡುಕ್ವೋಟೆ
ಅದರಾಗ ದುನ್ನಿ ದುರಿಗ್ಯೇರು ನೆನೆದಾರ ॥ ಪ ॥

ಉತ್ತರ ದಿಕ್ಕಿನ್ಯಾಗ
ಹುಟ್ಯೆನಾ ಪಾರಾಂಗಿ
ಸೊಕ್ಕಿಲೆ ಎ ಮಾರಾಮಲೆತಾನ ॥ ಪ ॥

ಕಲ್ಲು ದೇವರ ಒಡ್ಯಾಸಾನ
ಕಟ್ಟಿಗಿ ದೇವರ ಸುಡಿಸ್ಯಾನ
ಅವನಗೆ ಯಾ ದ್ಯಾವರು ಇದಿರಿಲ್ಲ. ॥ ಪ ॥

ಆರು ಸಾವಿರ ದಂಡು
ವಾರಿಲೆ ಕರರ‍್ಕೊಂಡು ಬರುತಾನೆ
ಚಿನ್ನದ ಕ್ವೊಟ್ಯೆಯ ನಂತು ನೋಡ್ಯಾನ ॥ ಪ ॥

ಹತ್ತು ಸಾವಿರ ದಂಡು
ಒತ್ತಲೆ ಕರಕೊಂಡು
ಮುತ್ತಲ್ಯೆ ಬರುತ್ತಾನಾ
ಚಿನ್ನದ ಕ್ವೊಟೆಗೆ ಬರುತ್ತಾನೆ ॥ ಪ ॥

ಚಿನ್ನದ ಕ್ವೋಟೆಗೆ ಬಂದಾನೆ
ಪಾರಾಂಗಿ ನಿಂತು ಕ್ವೋಟಿ ನೋಡ್ಯಾನ
ಚಿನ್ನದ ಕ್ವೋಟಿನಾ ಕಾಲಿಲ್ಯೆ
ದುಡ್ಯಾನ ದುನ್ನಿ ದುರಿಗ್ಯೆರು ಬಯಲಾಗ್ಯೇರು ॥ ಪ ॥

ಮುತ್ತಿನಕೋಟೆಯ
ಬಟ್ಟಿಲೇ ದುಡ್ಯಾನ
ಅಕ್ಕ ದುನ್ನ ದುರುಗ್ಯೇರು
ಬಯಲಾಗಿ ಪಕ್ಕನೇ ನಕ್ಕಾರಾ ॥ ಪ ॥

ನಿನ್ನ ಜೀವ ಅಳಿಯದಿದ್ದರೆ
ರೂಢಿಗೀಶ್ವರನ ಮಗಳಲ್ಲ
ತಾಯವ್ವ ಮಾಯವಾದೆ ॥ ಪ ॥

ದಿಟ್ಟ ಪಾರಾಂಗಿ
ನಿನ್ನ ಗುಟ್ಟಳಿಯದಿದ್ದರೆ
ಮುಕ್ಕಣ್ಣೇಶ್ವರನ ಮಗಳಲ್ಲ
ತಾಯವ್ವ ಮಾಯವಾದೆ ॥ ಪ ॥

ಮುಕ್ಕಣ್ಣೇಶ್ವರ ಮಗಳೆಲ್ಲಂದೇಳಿ
ಮಾಯವಾದಳು ಮಳಲಾಗ್ಯೆ
ತಾಯವ್ವ ಮಾಯವಾದೆ ॥ ಪ ॥

ಮಾಯವಾದಳೆ ಮಳಲಾಗ್ಯೆ
ಅಂದ್ಯೇಳಿ ಪಾರಾಂಗಿ
ಹಿಂದಾಕ ತಿರುಗ್ಯಾನ
ತಾಯವ್ವ ಮಾಯವಾದೇ ॥ ಪ ॥

ಗಿಡಗ್ಯಾನಬೇವಿನ ಕಡ್ಡಿ
ತಗೊಂಡು ಕಡ್ಡಿನಾ ಬಡಿಗ್ಯಾರ
ಕರೆಸ್ಯಾಳಾ ತಾಯವ್ವ ಮಾಯವಾದೇ ॥ ಪ ॥

ದುರುಗ್ಯೆರು ಅಂಬುದು
ಅವನಿಗೆ ಅರಿವಿಲ್ಲ
ತಾಯವ್ವ ಮಾಯವಾದೇ ॥ ಪ ॥

ತಪ್ಪತೇ ಹಡೆದವ್ವ ಬಿದ್ಯೆನಾ ನಿನ್ನ ಪಾದಕೆ
ಸದ್ಯನೇ ಮಡಾದೇ ನೀರಾ ತಾಗಳೆವ್ವ
ದಂಡಿಗೋಗುತ್ತೇನೆ ಬಡಿಗ್ಯಾರಣ್ಣ
ಬಂಡಿ ಓಜು ಮಾಡು ॥ ಪ ॥

ಹಾಲಿನ ಎ ಬಾನಾವುಂಡು
ದುನ್ನಿ ದುರುಗ್ಯೆರು ಅಯುಳ್ಳ
ಬಾಚಿಯ ಇಡಿದಾರ ॥ ಪ ॥

ಉರಿಗೋಗುತ್ತೇನಾ ಬಡಿಗ್ಯಾರಣ್ಣ
ಗಾಲಿ ಓಜು ಮಾಡು
ಆಯುಳ್ಳ ಬಾಚಿನ ಇಡಕೊಂಡ
ಕರೆಕಂಡಾ ಗುಡ್ಡಕಾ ಹೋಗ್ಯೆನಾ ॥ ಪ ॥

ಆಲದ ಎ ಮರ ಕಾಲಿಲ್ಯೆ
ದುಡ್ಯೆಳಾ ಬೇವಿನ ಮರದಾಗ
ರಥ ಮಾಡು ಊರಿಗೋಗುತ್ತೇನಾ
ಬಡಿಗ್ಯಾರಣ್ಣ ಗಾಲಿ ಓಜು ಮಾಡು ॥ ಪ ॥

ಹತ್ತಿಯ ಎ ಮರ ಬಟ್ಟಿಲ್ಯೆ
ದುಡ್ಯಾಳೆ ಚಕ್ಕಿಯ ಮರದಾಗ
ರಥ ಮಾಡು ದಂಡಿ ಹೋಗುತ್ತೇನೆ
ಬಡಿಗ್ಯಾರಣ್ಣ ಬಂಡಿ ಓಜು ಮಾಡು ॥ ಪ ॥

ಆಲದ ಎ ಮರದಾಗ
ಅರ್ಯೆದ್ಯೆರಿ ಕೆತ್ತಿಸ್ಯಾನ
ರಥ ಮಾಡು ಊರಿಗೋಗುತ್ತೇನೆ
ಬಡಿಗ್ಯಾರಣ್ಣ ಗಾಲಿ ಓಜು ಮಾಡು ॥ ಪ ॥

ಹತ್ತಿಯ ಎ ಮರ
ಅರದ್ಯೆರಿ ಕೆತ್ತಿಸ್ಯಾನ

ಸೂಜಿಯ ಮ್ಯಾಲೆ ರಥ ಮಾಡು
ದಂಡಿಗೋಗುತ್ತೇನೆ ಬಡಿಗ್ಯೆರಣ್ಣ ಬಂಡಿ ಓಜು ಮಾಡು ॥ ಪ ॥

ಹತ್ತಿಯ ಎ ಮರ
ಅರ್ಯೆದ್ಯೆರಿ ಕೆತ್ತಿಸ್ಯಾನ
ಕೆಡವಿನ ಮೇಲೆ ರಥವ ಮಾಡು
ದಂಡಿಗೋಗುತ್ತೇನಾ ಬಡಿಗ್ಯೆರಣ್ಣ ಬಂಡಿ ಓಜು ಮಾಡು ॥ ಪ ॥

ಮುಗಿದಂತ ರಥಗಳ ನೆತ್ತಿಯ ಮ್ಯಾಲ ಹೊತ್ತು
ಕೊಂಡು ನಡುವೂರಾಗ ಬರುತ್ತಾನೆ
ಊರಿಗೋಗುತ್ತೇನಾ ಬಡಿಗ್ಯಾರಣ್ಣ
ಗಾಲಿ ಓಜು ಮಾಡು ॥ ಪ ॥

ಮುಂದೆನಾ ಹೊರಟರಾ
ನಾ ಹೋದವು ರಾಜರು ಸಣ್ಣ
ಪಾತ್ರದಾವು ದಂಡಿಗೊಗುತ್ತೇನಾ
ಬಡಿಗ್ಯಾರಣ್ಣ ಬಂಡಿ ಓಜು ಮಾಡು ॥ ಪ ॥

ಸಣ್ಣ ಪಾತ್ರದಾವು ಅಯ್ಯವು
ದುನ್ನವು ಕೂಡಿಕೊಂಡು ವಾಸಮಾಡು
ಊರಿಗೋಗುತ್ತೇನಾ ಬಡಿಗ್ಯಾರಣ್ಣ ಬಂಡಿ ಓಜು ಮಾಡು ॥ ಪ ॥

ಎತ್ತವ್ವ ಹೊರಟರೇ
ಮತ್ತೆ ಹೋರಾಟರೇ ಚಿಕ್ಕ
ಪಾತ್ರದಾವು ಹೋಗ್ಯೆವಾ ॥ ಪ ॥

ಮುಗಿದಂಥ ರಥಗಳ
ಎರುತಾರೆ ಅಕ್ಕ ತಂಗಾರು
ಅರ್ಯೆಸಾರ ರಥವ ಕೈಲಾಸಕೆ ॥ ಪ ॥

ಅರಸೈರಾ ಸದರ ಎರೈರಾ ಕೈಲಾಸ
ಅಕ್ಕ ತಂಗ್ಯಾರು
ಶಿವನ ಸದರಿಗ್ಯೆರಾರೇ ಬರುತ್ತಾರೆ
ಬಂದರೇ ಎ ಶಿವಕ್ಕ ತಂಗ್ಯಾರು
ಬಾಜಿಯ ಕಂಬವಾ ಹಿಡಿದಾರ ॥ ಪ ॥

ಯಾರೇನಾ ಇದಿರ್‍ಯಾಡಾರ
ಅಮ್ಮನಾಡಿ ಹರಿಬ್ರಹ್ಮದಿಯಾರು
ಕೆಟ್ಟರಾ ನನಗ್ಯೆರಾಇದಿರ್‍ಯಾಡ್ಯೆರಾ ॥ ಪ ॥

ಅಳುವ ನರಕಲಿ ಬಿಟ್ಟು
ಕೊಡುವ ಸದರ ಬಿಟ್ಟು
ಈಗ್ಯಾಕ ಬಂದೆ ಎ ನನ್ನ ಮಗಳೇ ॥ ಪ ॥

ಉತ್ತರ ದಿಕ್ಯಾನಾಗ
ಹುಟ್ಯೇನಾ ಪಾರಾಂಗಿ
ಸೊಕ್ಕಿಲೆ ಎ ಮಾರ ಮಾಲೆತಾನ ॥ ಪ ॥

ಸೊಕ್ಕಲೆ ಎ ಮಾರ ಮಾಲೆತಾನ
ನಮ ತಂದೆ ಗಕ್ಕನೇ ನಪ್ಪಣಿ
ಕೊಡು ತಂದೆ ॥ ಪ ॥

ಗಕ್ಕನೇ ಅಪ್ಪಣಿ
ಕೊಡು ತಂದೆ ಅವನಗೆ
ಅಪ್ಪಳಾ ಮಾಡಿ ಸುಡುತ್ತೇನಾ ॥ ಪ ॥

ಅಪ್ಪಣಿ ಕೊಟ್ಟರೆ ಸುಡಲಿಕ್ಕೆ
ನರಕಲಿ ಸುಟ್ಯವಾ
ಲೆಕ್ಕರಾ ಎ ದಾಸ ಹಡೆದವ್ವ ॥ ಪ ॥

ಚಕ್ಕಡಿ ಎ ದಾಸ ನಡೆಯವ್ವ
ನನ್ನ ಮಗಳೇ ಮನಸ್ಸು
ಬಂದಾ ಕಡೇ ಹೊಡೆಯವ್ವ ॥ ಪ ॥

ಅಪ್ಪಣಿ ತಗೊಂಡ ಅಂತರಾದಾಗ
ರಥಗಳ ತಗೊಂಡು ಅಂತರದಾಗ
ರಥಗಳ ಜಾಣ ಬಳ್ಳಾರಿ ಎ ಇಳಿದಾನ ॥ ಪ ॥

ಅಮ್ಮನಾಡಿ ಬ್ರಹ್ಮದಿ ಕೆಟ್ಟರಾ
ನಿನಾಗ್ಯೆರಾ ಹಾಡ್ಯಾರಾ
ಜಾಣ ಎ ಬಳ್ಳಾರಿ ॥ ಪ ॥

ಇಳಿದಾರ ಅಕ್ಕ ತಂಗಿ
ಎರಿಗ್ಯೆರಿ ಶಶಿಯಾಗ್ಯೆ
ಎಕೇರಿ ಕರೆಸ್ಯಾನ ॥ ಪ ॥

ಬಸವನಗೌಡ ಎ ಗಚ್ಚಿನ
ಮಠ ಕಟ್ಯಾರಾ
ಊರು ಗುರು ರಾಯರ ಕೂಟ ಜೂಜನಾಡ್ಯರ ॥ ಪ ॥

ಹತ್ತು ಸಾವಿರ ದಂಡು
ಹೊತ್ತಿಲೆ ಕರಕೊಂಡ
ಓರಿ ಮೇಲೆ ಒರೆಕ್ಕ
ಚಿಕ್ಕ ಬಳ್ಳಾರಿಗೆ ಬರುತ್ತಾನೆ ॥ ಪ ॥

ಊರು ಗುರು ರಾಯನ
ಕೂಟ ಜೂಜಾನಾಡ್ಯಾರಾ
ಇಕ್ಕಿನ ಬಳ್ಳಾರಿ ಬಂದಾನೇ ಪಾರಾಂಗಿ ॥ ಪ ॥

ಕಂಚಿನ ಗುಡಾರ ಹೊಡ್ಯೆಸ್ಯಾನೇ
ಆರು ಸಾವಿರ ದಂಡು
ವಾರಿಲೇ ಕರಕೊಂಡು ಬರುತ್ತಾನೆ ॥ ಪ ॥

ಹತ್ತ ಸಾವಿರ ದಂಡು
ಒತ್ತಿಲೆ ಕರಕೊಂಡು
ಘಚ್ಚಿನ ಮಠಕ್ಕೆ ಬರುತ್ತಾನೆ
ಎತ್ತವ್ವ ನಾ ಮನೆಗೆ ॥ ಪ ॥

ಪಾರಾಂಗಿ ಮಠಕ್ಕೆ ಬಂದಾನೇ
ಬಾಗಿಲ ಎ ತಾನೇ ನೊಡ್ಯಾನಾ
ಜಾಣ ಎ ಪೂಜಾರಿ ಕರೆಸ್ಯಾನಾ
ಬೀಗವ್ವ ನೀನಾ ತೇಗ್ಯೇಯೋ ॥ ಪ ॥

ಬೀಗವ್ವ ಎ ನೀನು ತೇಗ್ಯೆಯೇ
ನಾ ತೆಗೆಯುವುದಿಲ್ಲ ಬಾಗಿಲ
ಬೀಗವ ಮುರಿದಾನ
ಬೀಗ ಎ ತಾನಾ ಮುರಿದಾನಾ ॥ ಪ ॥

ತೋರಿಸಿ ಎನ್ನ ತಾಯಿ
ಒಳಗೆ ನಾ ಎ ತಾನು
ಬಂದಾನೇ ಸೀರಿಗ್ಯಾ ತಾನೇ
ಕೈ ಹಾಕುತ್ತಾನೆ ॥ ಪ ॥

ನೋಡು ಪಾರಾಂಗಿ ನನ್ನ
ಸೀರೆ ಮುಟ್ಟದಿರು
ಹಲ್ಲು ಮುರಿದೇನಾ ॥ ಪ ॥

ದಿಟ್ಟ ಪಾರಾಂಗಿ
ನನ್ನ ಬಟ್ಟಿ ಮುಟ್ಟಿದಾರೆ
ಸೂಲದ ಹಲ್ಲ ಮುರಿದೇನೋ
ಚಕ್ಕಡಿಯ ಅಡಿಗ್ಯೆಹೋಗದೇನಾ ॥ ಪ ॥

ನೆತ್ತರಕಾರಿ ಕಣ್ಣು ತೆಗೆದಾಳೆ
ನೆತ್ತರ ಎ ಕಣ್ಣುತೆಗೆದಾಳೆ
ರಕ್ತಕಾರಿ ಮನಾಗ್ಯೆನಾ ॥ ಪ ॥

ಸೂಲದ ಹಲ್ಲು ಮುರಿದೆನೋ
ರಕ್ತಕಾರಿ ಮನ್ಯಾಗ್ಯಾನಾ
ನನ್ನ ಪ್ರಾಣವ ಪಡೆಯವ್ವ
ಪ್ರಾಣವೇ ಪಡೆಯಲೇ ಪಾದಕ ಲಿಂಗವೇ ॥ ಪ ॥

ತಪ್ಪತೆ ಹಡೆದವ್ವ
ಬಿದ್ದೇನಾ ನಿನ್ನ ಪಾದಕ್ಕೆ
ಪ್ರಾಣವೇ ಪಡೆವ ಪದಕ ಲಿಂಗವೇ
ಸಜ್ಜನ ಪ್ರಾಣವ ಉಳಿಸವ್ವ ನನ್ನವ್ವ ॥ ಪ ॥

ಬುದ್ದಿಯಾ ಎ ಕೊಟ್ಟಾನಾ
ಗಳಿಗ್ಯೆಪಾರಾಂಗಿ ಅಡಿಗ್ಯೆನೋ ಹೋಗೆದ್ಯೆನಾ
ಮತ್ತೆನಾ ಪಾರಾಂಗಿ
ಎಚ್ಚರ ಮಾಡದೇನಾ ॥ ಪ ॥

ಬುದ್ದಿಯ ಕೊಟ್ಟಾನಾ
ಅರಗಳಿಗೆ ಚಕ್ಕಡಿ
ಅಡಿಗ್ಯೆ ಹೊಸದನಾ ॥ ಪ ॥

ನನ್ನವ್ವ ಪ್ರಾನ ಪಡೆದಾನ
ಕೈಯೋಂದು ಕಾಲೊಂದು
ಜಿಗಿದು ಹೋಗ್ಯೆದಾರೋ
ನನ್ನವ್ವ ಅರಗಳಿಗ್ಯಾಗಾ ॥ ಪ ॥

ನೀ ಬಾರವ್ವ ಎರಿಯೇ
ದಂಡ್ಯೆಗೂ ಉಳಿವಿಲ್ಲ
ದಂಡ್ಯೆನ ಒಳಗೆ
ಮಗ್ಗೆನಾ ಅಕ್ಕ ತಂಗಿ ॥ ಪ ॥

ಹೀರಿಕ್ಯಾದ ಹೊಡೆದಾರ
ರಕ್ತ ಕಾಲುವೆ ಹರಿಸ್ಯಾರ
ದಂಡಗ್ಯೆಉಳಿಗಾಲವಿಲ್ಲ ॥ ಪ ॥

ಪೂಜೆ ಮಾಡೋಣ ಬನ್ನಿರೇ
ಅಮ್ಮಗೆ ಪೂಜೆ ಮಾಡೋಣ ಬನ್ನಿರೆ
ಅಕ್ಕಿ ಬಜಾರನ್ನೆಲ್ಲಾ
ಸುಟ್ಟಿ ಬಿಟ್ಟಾರಾ ॥ ಪ ॥

ಕಾಯಿ ಬಜಾರವೆಲ್ಲ
ಸುಟ್ಟಿ ಬಿಟ್ಟಾರಾ
ಪೂಜೆ ಮಾಡೋಣ ಬನ್ನಿರೆ
ಪೂಜೆ ಸೇವೆ ಮಾಡೋಣ ಬನ್ನಿರೆ ॥ ಪ ॥

ಹಾಡಿದವರು:
ಹನುಮವ್ವ ಮತ್ತು ಸಂಗಡಿಗರು ಅರಸಿಕೇರಿ

## ಹಾಡುಗಳು – ೨

ಚಂದಿರನಾ ಮೊದಲ ನೆನೆದೇನಾ
ಚಂದಿರನಾ ಮೊದಲ ನೆನೆದೇನಾ
ಸಾವಿಸಣ್ಣ ಮಂಡಲದ ಬೇವಿನ ರುದ್ರಾಕ್ಷಿ
ಬ್ಯಾಡರ ಮಕ್ಕಳಿಗೆ ನಿಜಲಿಂಗ ॥ ಪ ॥

ಬ್ಯಾಡರ ಮಕ್ಕಳಿಗೆ ನಿಜಲಿಂಗ
ಬ್ಯಾಡರ ಮಕ್ಕಳಿಗೆ ನಿಜಲಿಂಗ ಗೋಣಿಬಸವ
ಬಾರದ ನುಡಿಯ ಬರಕೊಡ
ಬಾರದ ನುಡಿಯ ಬರಕೊಡ ॥ ಪ ॥

ಸುತ್ತ ಏಳು ಏಡಿ ಏಳೆನಾಗ
ಸುತ್ತೇನಾ ಏಳು ಏಡಿ ಏಳೆನಾಗ ನಾಗೇಂದ್ರ
ಅಪ್ಪ ನನ ಧ್ವನಿಗೆ ನೆರಳಾಗ್ಹೋ
ಅಪ್ಪ ನನ ದೇವನಿಗೆ ನೆರಳಾಗ್ಹೋ ॥ ಪ ॥

ಗೋರಿ ಬಗುಲಾಗಿ ಹೋಗಿ ಮೈ ತಿರುವವಳೇ
ಸಾಲ ಹೇಳ್ಯಾವೆ ಏಳಿನಾಗ
ಸಾಲನಾನೇ ಹೇಳ್ಯಾವೇ ಏಳಿನಾಗ ನಾಗೇಂದ್ರ
ಅಣ್ಣ ನಮ ದನಗೆ ನೆರಳಾಗ್ಹೋ ॥ ಪ ॥

ನ್ಯಾಗ್ಗಲಿ ಏ ಹೂವ ಇದ್ದೊಷ್ಟು
ನ್ಯಾಗ್ಗಲಿ ಏ ಹೂವ ಇದ್ದೊಷ್ಟು ಕೋಯ್ದುಕೊಂಡೆ
ಸಿದ್ದಮಲ್ಲೇಶಗೆ ಇವನ್ನೋಯ್ಯ ॥ ಪ ॥

ಸಿದ್ದಮಲ್ಲೇಶಗೆ ಇವನ್ನೋಯ್ಯ
ಸಿದ್ದಮಲ್ಲೇಶಗೆ ಇವನ್ನೋಯ್ಯ ನಮ ದೊರೆಯೇ
ಕದ್ದೋವನೇ ಬರಲಿ ಸಭೆಯಾಗೇ ॥ ಪ ॥

ಅಜ್ಜ ನಾ ಕರಕಂದೇ ಅಜ್ಜಿಯ ಕರಕಂದೇ
ಮೂರ ಗಂಟೆಗೆ ಹೋಗುತಾರೆ.
ಮೂರನೇನಾ ಗಂಟೆಗೆ ಹೋದರೇ ಅಂಜಣ್ಣ ॥ ಪ ॥

ಚಿಗವ್ವ ನೀರಾ ಕೊಡುತಾಳೆ
ಕೈ ಕಾಲು ಎ ಮಾರಿ ತೊಳೆದಾರೆ ಅವರಿನ್ನೂ
ಓಳಿಯಾಕೆ ಹೋಳಿಗೆ ಕೊಡುತಾರೆ ॥ ಪ ॥

ಚಿಗವ್ವನೂರಿಗೇ ಕರಿದಾರೆ
ಚಿಗವ್ವನೂರಿಗೆ ಕರಿದಾರೆ ದಂಡ್ಯಾಣ್ಣ
ಬರುವುದಿಲ್ಲವೆಂದೇ ಹೇಳುತಾನೆ ॥ ಪ ॥

ಗಾಜಿನ ಬಳಿಯ ಬಡಿದಾಳೆ
ಮುತ್ತಿನ ಮುಗುತಿಯ ತೆಗುದಾಳೆ
ಮಂಗಳ ಸೂತ್ರವ ಅರುದಾಳೆ ॥ ಪ ॥

ಅಮ್ಮಜ್ಜನ್ನ ಕೈಯಿಗೆ ಕೊಡುತಾಳೆ
ಅಜ್ಜನ್ನ ಕರಕಂದೇ ಅಜ್ಜಿಯ ಕರಕಂದೇ
ಅರಸಿಕೇರಿಗೆ ಬರುತಾರೆ ॥ ಪ ॥

ಅಚ್ಚಿಗೆ ಮಾತಿಗೆ ಚುಚ್ಚಿಗಿ ಮಾತಿಗೆ
ಬಸಣ್ಣನಿಂದ ಬರುತ್ತಾರೆ
ಗಾಳಿನೇ ಬಿಸುತಿವೆ ಮರನ ವಾಲಾಡುತಿವೆ
ಅರಸಿಕೇರಿಗೆ ಬರುತಾರೆ ॥ ಪ ॥

ನಮ್ಮ ತಮ್ಮರಿಗೆ ಗತಿಗೆಮ್ಮನಗೆ ಬಂದರೆ
ಸ್ಯಾವಿಗೆ ಊಟ ಮಾಡಿರವ್ವ
ಸ್ಯಾವಿಗೆ ಎ ಊಟ ಮಾಡಿರವ್ವ ಅಂದ್ಹೇಳಿ
ಸ್ಯಾವಿಗೆ ಊಟ ಮಾಡಿಸ್ಯಾರೆ ॥ ಪ ॥

ಸಣ್ಣಕ್ಕಿ ಅರಳಿ ಬಸಿದ್ಯಾರೆ ದಂಡ್ಯಾವ್ವ
ನೀರಾ ಕೊಟ್ಟು ಉಣ್ಣಕಾ ನೀಡುತಾಳೆ
ಮಾಡಿದ ಅಡಿಗ್ಯಾಕೆ ಹೆಸರು ಬೆರೆಸ್ಯಾರೆಂದೆ
ಬಾನಿಗೆ ಬಸಣ್ಣ ಸೂರುವ್ಯಾನೆ ॥ ಪ ॥

ನಿಂತ ದಂಡ್ಯೆಣ್ಣ ನೋಡುತಾನೆ
ನಮ್ಮ ತಮ್ಮ ಆಗಿದ್ದರೆ ನಮ್ಮ ಮನೇಲಿ ಉಣತಿನೆಂದ
ಬಾನಿಗೆ ನೀರಾ ಸುರುವಿದಿಯೋ
ಬಾನಿಗೆ ಹೇ ನೀರಾ ಸುರುವಿದೆಯೋ ಬಸಣ್ಣ ॥ ಪ ॥

ನಿನಗೆ ಫಲಗಳು ಮೊದಲಿಲ್ಲೋ
ನಿನಗೇನಾ ಫಲಗಳು ಮೊದಲಿಲ್ಲ ಅಂದ್ಹೇಳಿ
ದಂಡ್ಯಾಣ್ಣ ಕುಂದೇವಾ ನುಡಿದಾನೆ ॥ ಪ ॥

ಹಾದ್ಯಾಗ ಹುಟ್ಟಿದೋನೆ ಬಿದ್ಯಾಗ ಬೆಳೆದೋನೆ
ನಿನಗೆ ಫಲಗಳು ಕೊಡಲಿಲ್ಲೋ
ಕರದಲ್ಲಿ ಬರುತೇನೋ ಬಸಣ್ಣ
ಒಟ್ಟಿನಲ್ಲಿ ಜಗಳ ಹಿಡು ಹೋಗೋ ॥ ಪ ॥

ಅಲ್ಲಿಂದ ಬಸಣ್ಣ ಎಲ್ಲಿಗೆ ನಡೆದಾನೆ
ಕಬಡಾದರ ಈರಣ್ಣನ ಮನೆಗೋದ

ಕಟ್ಟಿಯ ಮ್ಯಾಲೆ ಕುಂತಾನೆ ಈರಣ್ಣ
ಬಸಣ್ಣ ಬರುವುದೇ ನೋಡುತಾನೆ ‖ ಪ ‖

ಎಂದೋ ಬಾರದ ಬಸಣ್ಣ ಹಿಗ್ಯಾಕೆ ಬಂದ್ಯಾಣ್ಣ
ಬಂದರಾ ಬರೋ ಮನೆಗೊಳ್ಳೋ
ಕುಂದರಾ ಬಂದಿಲ್ಲ ನಂದಾರ ಬಂದಿಲ್ಲ
ಹಡೆದವ್ವಳ ಸೇವೆ ಕೊಡಬೇಕಾ ‖ ಪ ‖

ಹಡದವ್ವಳ ಏ ಸೇವೆ ಕೊಡಬೇಕ ಈರಣ್ಣ
ತುಸು ಮನಕ್ಕೋಂದೇನಾ ನುಡಿದಾನೋ
ಹಾದ್ಯಾಗ ಬಂದವನಂತೆ ಬಿದ್ಯಾಗ ಬೆಳೆದವನಂತೆ
ಮನೆಗೆ ಫಲಗಳು ಮೊದಲಿಲ್ಲೋ ‖ ಪ ‖

ಮನೆಗೇನಾ ಫಲಗಳು ಇಲ್ಲತ್ತೇಳಿ
ದಂಡ್ಯಾಣ್ಣ ಕುಂದ್ಹೇವಾ ನುಡಿದಾನೋ
ಹೆಳಿದ್ಹೋಟ ಹಣದ ಕೊಡಬೇಕಾ
ಕದಗ ಪತ್ರಾವ ಬರಿದಾರೆ ‖ ಪ ‖

ಕಾದಗದ ಪತ್ರವೇ ಬರಿದಾನೇ ಈರಣ್ಣ
ಕೊಡಪಾನ ಹಣವ ತರುವ್ಯಾನೆ
ಬಸಣ್ಣನವರೇ ಕೊಡುತಾರೆ
ಕೊಡಪಾನದ ಹಣವನ್ನೇ ಕಟ್ಟಿಕೊಂಡೆ ಬಸಣ್ಣ ‖ ಪ ‖

ಹರಪನಳ್ಳಿಗೆ ಹೋಗುತಾನೆ
ಗಾಳಿನೇ ಬೀಸುತಿದೆ ಮರಗಳು ವಾಲುತಿವೆ
ತಾಸ್ಹೊತ್ತಿಗೆ ಬಂದು ಹೋಗುತಾರೆ
ಯಾವೂರರೆಂದೇ ಕೇಳುತಾರೆ ‖ ಪ ‖

ಅರಸಿಕೇರಿರೆಂದೇ ಹೇಳುತಾರೆ
ಯಾತಕ ನೀವು ಬಂದಿದರಾ
ಇತ್ತ ಬಾರೋ ದೊರೆರಾಯ ಮತ್ತೊಂದು ಹೇಳೇನಾ
ದಂಡ್ಯಾಣ್ಣ ಶಮನ ಮಾಡಬೇಕು ‖ ಪ ‖

ದಂಡ್ಯಾಣ್ಣ ಶಮನ ಮಾಡಬೇಕು ಅಂದ್ಹೇಳಿ
ಕೊಡಪಾನ ಧನವ ಸುರುವ್ಯಾರೇ
ಹಾದ್ಯಾಗದಲಿ ಬರುತಾವೆ
ಹತ್ತೇನಾ ವರುಷದ ಚಿಕ್ಕ ಪ್ರಾಯದ ದಂಡ್ಯಾಣ್ಣಗ ॥ ಪ ॥

ಮತ್ತೇ ಶಮನ ಮಾಡುತಾರೆ
ಹನ್ನೊಂದು ವರುಷದ ಚಿಕ್ಕ ಪ್ರಾಯದ ದಂಡ್ಯಾಣ್ಣಗ
ಮತ್ತೇ ಶಮನಗಳ ಮಾಡಿ ಅರಸಿಕೇರಿಗೆ ಕಳಿವ್ಯಾರೇ ॥ ಪ ॥

ಹತ್ತೇನಾ ವರುಷದ ಚಿಕ್ಕ ಪ್ರಾಯದ
ದಂಡ್ಯಾಣ್ಣಗೆ ಒತ್ತಲಿ ಶಮನ ಬರುತಾವೆ
ಅವರ ಅಕ್ಕ ತಂಗ್ಯಾರದೇ ಶಿವಗೋಳೇ
ಅವರ ತಾಯಿ ಮಕ್ಕಳದೇ ಶಿವಗೋಳೇ ॥ ಪ ॥

ಹನ್ನೆರಡು ವರುಷದ ಚಿಕ್ಕ ಪ್ರಾಯದ ದಂಡ್ಯಾಣ್ಣಗ
ಬಾಗಲಿಗೆ ಶಮನ ಬರುತಾವೆ
ಅವರ ತಾಯಿ ಮಕ್ಕಳದೇ ಶಿವಗೋಳೇ ॥ ಪ ॥

ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ನಡೆದಾನೇ
ಹಡೆದವ್ನ ಮನಗೆ ನಡೆದಾನೆ
ಹಡದವ್ನ ಗುಡಿಗೆ ನಡೆದಾನೆ ॥ ಪ ॥

ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೇ ನೋಡೆಯವ್ವ
ಹೂವಿನ ಪುಟ್ಟಿ ಬಲಗೈ ಮಂದಾಗಾಮನಿ
ಹೂವಿನ ಎ ಪುಟ್ಟಿ ಬಲಗೈಯಲ್ಲಿ ಇಡಕೊಂಡೆ ನೋಡೆಯವ್ವ
ಹೊಸಬಾವಿ ತೋಟಕ್ಕೆ ನಡೆದಾನೇ ಮಂದಗಾಮನಿ ॥ ಪ ॥

ಹೊಸಬಾವಿ ತೋಟಕ್ಕೆ ನಡೆದಾನೇ ದಂಡ್ಯಾಣ್ಣ ನೋಡೆಯವ್ವ
ನೂರೊಂದು ಹೂವ ಇಡುತ್ತಾನೆ ಮಂದಗಾಮನಿ
ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ನಡೆದಾನೆ ನೋಡೆಯವ್ವ
ಹಡೆದವ್ನ ಮನಿಗೆ ನಡೆದಾನೆ ಮಂದಗಾಮನಿ ॥ ಪ ॥

ಹಡೆದವ್ವ ಏ ಗುಡಿಗೆ ನಡೆದಾನೆ
ದಂಡ್ಯಾಣ್ಣ ಪನ್ನಿರಲಿ ಮೊಕವ ತೊಳೆದಾನ
ಹೆತ್ತವ್ವನ ಎ ಸೀರೆ ಇಪ್ಪತ್ತೊಂದು ಮೊಳ
ಒಪ್ಪಸ ದಂಡ್ಯಾಣ್ಣ ನೀರಿಗ್ಹೋದೆ ॥ ಪ ॥

ಒಪ್ಪಸ ದಂಡ್ಯಾಣ್ಣ ನೀರಿಗ್ಹೋದೆ ಆ ಮೇಲೆ
ಕೊಜ್ಜುಲದ ಕೊನೆ ಸೆರಗ
ತಾಯವ್ವ ಓ ಸೀರೆ ನಾಲ್ವತ್ತೊಂದು ಮೊಳ
ಮೋಹದ ದಂಡ್ಯಾಣ್ಣ ನೀರಿಗ್ಹೋದ ॥ ಪ ॥

ಒಲೆಯ ಜಳಕ ಕೊನೆ ಸೆರಗ
ನೂರೊಂದು ಹೂವ ಮುಡಿಸ್ಯಾನೆ
ನೂರೊಂದು ಪತ್ರಿ ಮುಡುಸ್ಯಾನೆ
ತೆಂಗಿನ ಹೇ ಕಾಯಿ ಗಡದಾಗಿ ಒಡೆದಾನೆ ॥ ಪ ॥

ನೂರೊಂದು ಪೂಜೆ ಮುಡಿಸ್ಯಾನೆ
ನೂರೊಂದು ಎ ಪೂಜೆ ಇಳಿವ್ಯಾನೆ
ದಂಡ್ಯಾಣ್ಣ ಒಲ್ಲಿಸ್ಯಾಗಿಟ್ಟು ಅಳುತಾನೆ
ಯಾಕ ಅಳುತಿ ಹಸು ಮಗನೇ ॥ ಪ ॥

ಯಾಕ ಅಳುತಿ ಹಸು ಮಗನೇ ದಂಡ್ಯಾಣ್ಣ
ನಿನ ಹಿಂದೆ ನಾನು ಇರುತ್ತೇನೋ
ಗೊರಗತ್ತಿ ಬಸವಣ್ಣ ಅಳುವು ಕಳಿಸ್ಯಾನೇನ
ನನ್ನವು ಮೂರು ಮಾತು ಕಳಿಸೇಳು ॥ ಪ ॥

ಮಂದಿ ಮಾನವರು ಬಂದಿರೆಂದ್ಹೇಳಿ
ನೀ ಬರುವ ಗುರುತ ನನಗ್ಹೇಳಿ
ನಾನೇನೆ ಬರುವುದೇ ಉದಾನಕಡ್ಡಿ
ಎ ನಾತ ಚಂದಿರನ ಕೆಟ್ಟ ನಾರುತಾವೆ ॥ ಪ ॥

ಜೋಡೆರಡು ಕವಡೆ ನುಡಿದಾವೆ
ಹಡದೆವ್ವ ಬಂದಳ ಅನ್ನು ಮಗನೇ
ಅಂದಾಳೆ ಆಡ್ಯಾಡಿ ಮಗನಿಗೆ ಹೇಳ್ಯಾಳೇ
ಮಾಯವಾದಳೇ ಮಳಾಲಾಗಿ ॥ ಪ ॥

ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಬಂದಾನೆ
ಸಮೂದ್ರ್ಯಾಳ ಬಂಡಿ ಹುಡಿಸ್ಯಾನೆ
ಬಳೆಗಳ ಎತ್ತು ಹಿಡಿಸ್ಯಾನೆ
ಬಂಡಿಯ ಕೊಳ್ಳ ಕಟ್ಟುತ್ತಾನೆ ॥ ಪ ॥

ಬಂಡಿಯ ಎ ಕೊಳ್ಳ ಕಟ್ಯಾನ ದಂಡ್ಯಾಣ್ಣ
ಬಂಡಿಯ ಮ್ಯಾಲೇ ಕುಳಿತಾನೆ
ನಡು ಪ್ಯಾಟಿಗೆ ಬಂಡಿ ಹೊಡಿದಾನೆ
ನಿಂತೆ ತುಸು ಮನರೇ ನೋಡುತಾರೆ ॥ ಪ ॥

ಹಿಂದೆ ಬರುವವರೆಲ್ಲ ಮುಂದೆ ಬರುವವರೆಲ್ಲ
ನಡುಪ್ಯಾಟ್ಯಾಗ ಬಂಡಿ ಬಿಡುತಾನೆ
ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೆ
ಚಕ್ಕೇರಿ ಕಾ ಬಂಡಿ ಹೊಡೆದಾನೆ ॥ ಪ ॥

ವಾಲಪ್ಪಗ ಕೈಯ ಮುಗಿದಾನೆ
ನಂದ್ಹೇನೆ ಹೆಜ್ಜೆವು ನನ್ನಂತೆಯೇ ಅವರ
ಉತ್ತತ್ತಿ ಸೂರಿ ಬಿಡುತ್ತೇನು
ವಾಲಪ್ಪಗೆ ಕೈಯ ಮುಗಿದೇನೆ ॥ ಪ ॥

ಪಾಲಿಕರ ಹೊಲದ ಮೇಲೆ ನುರಿಕವದ ಮಾಡಿ
ಹರಪನಳ್ಳಿಗೆ ಹೋಗುತ್ತಾನೆ
ಗಾಳಿನೇ ಬಿಸುತಿಗೆ ಮರವಾಲಾಡುತಿದೆ
ಕಛೇರೀಕೆ ಮುಂದೆ ಬಂಡಿ ತರುಬಿ ॥ ಪ ॥

ಬಂಡಿಯ ಕೊಳ್ಳ ಹರಿದಾನೆ
ದೊಡ್ಡರಿಕೆ ನೋಡಿ ಅಳುತಾನೆ
ಎಂಥ ನೌಕರಿಕೆ ಹೋಗಲವ್ವ
ಎಂಥ ಸಾವಲು ಮಾಡಲವ್ವ ॥ ಪ ॥

ದಿಲ್ಲಿಯ ಜವಾನರೇ ನೋಡುತಾರೆ
ಅರಸಿಕೇರೆಂದೆ ಕರೆದಾರೆ
ಹೊಂಡಕರಿಗೆ ಹೋಗಲಿಲ್ಲ
ಮೊದಲನೇ ಸಾರಿಗೆ ಕರೆದಾರೆ ॥ ಪ ॥

ಮೊದಲ ಸಾರಿಗೆ ಹೋಗಲಿಲ್ಲ
ಎರಡ ಸಾರಿಗೆ ಹೋಗಲಿಲ್ಲ
ಮೂರು ಸಾರಿಗೆ ಕರೆದಾರೆ
ಮೂರು ಸಾರಿಗೆ ಹೋಗುತಾನೆ ॥ ಪ ॥

ಕಂಬಿಗೆ ದಂಡ್ಯಾಣ್ಣ ಸುಮ್ಮಕೆ ಹೋಗುವಾಗೆ
ಜೋಡೆರಡು ಕವಡೆ ನುಡಿದಾವೆ
ಬಾಲೇನೇ ದಂಡ್ಯಾಣ್ಣ ಸುಮ್ಮ ಸುಮ್ಮಕ
ಹತ್ತುವಾಗ ಚಂದ್ರು ಕಟ್ಟಿ ನಗುತಾವೆ ॥ ಪ ॥

ಹಡದವ್ವ ಬಂದಾಳ ಅನುತಾನೆ
ತಾಯಿಯವ್ವ ಬಂದಾಳೆ ಅನುತಾನೆ
ದಂಡ್ಯಾಣ್ಣ ಮುಂಚೆ ಹತ್ತುತಾನೆ
ಜೋಡೆ ಕಾಲಲ್ಲೇ ನಲ್ಲುತಾನೆ ॥ ಪ ॥

ಜೋಡೇ ಕಾಲು ಆದರೇನು
ಒಂಟಿ ಕಾಲು ಆದರೇನು
ಸರಿ ಪಂಥಿಲೇ ನೀನು
ಕುಂದ್ರು ಬಾರೋ ॥ ಪ ॥

ನೀವು ದೊಡ್ಡವರಪ್ಪ ನಾನು ಸಣ್ಣವನಪ್ಪ
ಸರಿ ಪಂಥಿಲಿ ನಾನು ಕುಂದ್ರುಬಾರೆ
ನೀನು ಸಣ್ಣವನಾದರೆ ಮಾತು ಸಣ್ಣವುದೇನು
ಸರಿ ಪಂಥಿಲಿ ನೀನು ಕುಂದ್ರು ಬಾರೋ ॥ ಪ ॥

ದೊರೆಗಳ ಸನಹಲೇ ಕುಳಿತಾನೇ
ಬಸಣ್ಣನವರೇ ಕರುದಾರೆ
ಬಸಣ್ಣ ಓಲೆ ಬರುತಾರೆ
ಬಸಣ್ಣ ಸವಾಲಿಗೆ ಬರುತಾರೆ ॥ ಪ ॥

ಏನಾರ ದೊರೆರಾಯ ಕೇಳುತಾನೆ
ಅವರ ಮನೆಯ ಮಾರು ಕೇಳುತಾರೆ
ಬದುಕೆಲ್ಲ ಒಂದೇ ಹೇಳುತಾನೆ
ಪಟ್ಟಿಯ ಕೊಲ್ಲ ಕಳುವುತಾನೆ ॥ ಪ ॥

ಬರತೆಲ್ಲಿ ಒಂದೇ ಹೇಳುತಾನೆ
ರಾಣಿಯರ ಹಿಂಡು ಕಳುವುತಾನೆ
ಶ್ರೀಮಂತರ ಒಡವೆ ಕಳುವುತಾರೆ
ಗೊರತೆಲ್ಲಿ ಬಂದತ್ತಾ ಹೇಲೇನೆ ಬಸಣ್ಣ ॥ ಪ ॥

ಅದ್ಕೆ ಬಾ ಅಂದೆ ಕರೆದಾರೆ
ದಂಡ್ಯಾಣ್ಣನವರೇ ಕರುದಾರೆ
ದಂಡ್ಯಾಣ್ಣ ಕವಲಿಗೆ ಬರುತಾರೆ
ದಂಡ್ಯಾಣ್ಣ ಕವಲಿಗೆ ಬರುತಾರೆ ಏನಾದರೂ ದೊರೆರಾಯ ॥ ಪ ॥

ಅವರ ಮನೆಯ ಮಾರುಗಳ ಕೆಳುತಾರೆ
ಅವರ ಮನೆಯ ಕಟ್ಟಿ ಹೆಳುತಾರೆ
ಅವರು ಮನೆ ಕಲ್ಲುಗಳು ಹೇಳುತಾರೆ
ಅವರ ರಾಡಿಯ ಹೇಳುತಾನೇ ॥ ಪ ॥

ಅವರ ಹೆಣ್ಣು ಮಕ್ಕಳ ವಡವೆ ಹೇಳುತಾನೆ
ಅವರ ದಂತರೆ ಮ್ಯಾಲ ಹೇಳುತಾನೆ
ಅವರ ಸೇರಿತ ಅವರಿಗೆ ಸರಿತಲ್ಲ
ಅವರವರ ಬಗೆ ತಾಳೋ ॥ ಪ ॥

ಅವರವರ ತವರಿಗೆ ಹೋಗಿದ್ದಳೋ
ದೊರೆರಾಯ ನಮ್ಮಜ್ಜ ನಮ್ಮಜ್ಜಿ
ಕರೆಯಲು ಹೋಗಿದ್ದಾರೋ
ಬರುವುದಿಲೆಂದು ಹೇಳಿದರು ॥ ಪ ॥

ಗಾಜಿನ ಬಳೆಯ ಹೊಡಿದಾಳೋ
ಮುತ್ತಿನ ಮುಗುತಿ ತೆಗೆದಾಳೊ
ಮಂಗಳ ಸೂತ್ರವ ಅರುದಾಳೊ
ನಮ್ಮಜ್ಜ ನಜ್ಜಿ ಕೈ ಕೊಡುತಾಳೋ ॥ ಪ ॥

ಅವನಿಗೆ ಫಲಗಳು ಕೊಡೋದಿಲ್ಲ
ಎದ್ದು ಬಾರೋ ದೊರೆರಾಯ ಮತ್ತೊಂದು
ಹೇಳೇನು ಒಪ್ಪಿದರೇ ಫಲ ಕೊಡುತೇನು
ತಂದ್ಯೇನು ದಂಡ್ಯಾಣ್ಣ ಕವಲ ಬಡವಾದೆ ॥ ಪ ॥

ಬವಲಿ ಬಾಯಿ ಬಿಡುತಾವೆ
ಒಪ್ಪಿದರೇ ದಂಡ್ಯಾಣ್ಣ ವಕೀಲ ಬಾಯಿ
ಬಿಡುತಾನೆ ಎದ್ದೋ ಬಾರೋ
ದಂಡ್ಯಾಣ್ಣ ಮತ್ತೊಂದು ಹೇಳೇನು ॥ ಪ ॥

ದಂಡ್ಯಾಣ್ಣನಂತೆ ಹೇ ಆಗುತಾವೋ
ದಂಡ್ಯಾಣ್ಣನಂತೆ ಹೇ ಆಗುತ್ತಾನೆ ಅಂದ್ಹೇಳಿ
ನಿಂತ ದೊರೆ ಹೇಳುತಾರೆ
ಬಸಣ್ಣ ಇಳಿದಾನೆ ॥ ಪ ॥
ಅರಿದ್ದ ಅದರ ಮ್ಯಾಲ ಮೂರಿಂದ

ಮೂರಿಂದ ಮೊದಲ ಮಾಡಿ
ಅರಸಿಕೇರಿಗೆ ಬರುತಾರೆ
ದಂಡ್ಯಾಣ್ಣ ಪೂವಿ ಇರುತಾರೆ ॥ ಪ ॥

ಎದ್ದು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನು
ನಿನ್ನಂತೆ ಸೇವೆ ಆಗುತಾವೋ ಎದ್ದು ಬಾರೋ
ದಂಡ್ಯಾಣ್ಣ ಮತ್ತೊಂದು ಹೇಳೇವು
ಊರು ಒಳಗ ಪೋಟೋ ಹಾಕಬಾರದು ॥ ಪ ॥

ಊರು ಒಳಗ ಪೋಟೋ ಹಾಕಬಾರದು
ದಂಡ್ಯಾಣ್ಣ ಮದುವೆ ಆಗಿ ನೀನು ಬಾರೋ
ಮದುವೆ ಯಾರಿಗೆ ಬೇಕೋ ಮದುವೆ ಯಾರಿಗೆ ಬೇಕೋ
ನನ್ನ ಹೆಜ್ಜೆವು ನನಗೆ ಸಿಗುವ ತನಕ ॥ ಪ ॥

ತಿಂಗಳು ಅನುಸಾರ ಎಣುಸುತಾರೆ
ಮದಿವ್ಯಗಿ ನೀನು ಬರುಹೋಗೋ
ದೈರ್ಯ ಸಲಮು ಕೊಡುತಾನೆ
ದೈರ್ಯನೇ ಸಲಮು ಕೊಟ್ಟನೇ ದಂಡ್ಯಾಣ್ಣ
ಕಚ್ಚರಿಕೆ ಬಿಟ್ಟು ಇಳಿದಾನೆ ॥ ಪ ॥

ಅರಸಿಕೆರಿಗೆ ಬರುತಾರೆ
ಅರಸಿಕೇರಿಗೆ ಕರುದಾರೆ
ಮನಿಗೊಬ್ಬರಿಗೆ ಇರ ಹೇಳಿ ಮನಿಗೊಬ್ಬರ ಬರ ಹೇಳಿ
ದಂಡ್ಯಾಣ್ಣನ ಮನಿಗೆ ಬರುತಾರೆ ॥ ಪ ॥

ರೊಟ್ಟಿ ಬುತ್ತಿಗಳ ಮಾಡುತಾರೆ
ರೊಟ್ಟಿ ಬುತ್ತಿಗಳ ಕಟ್ಟುತಾರೆ
ರೊಟ್ಟಿ ಬುತ್ತಿಗಳ ಕಟ್ಯಾರ ದಂಡ್ಯಾಣ್ಣ
ಬಂಡಿಗೆ ಬುತ್ತಿ ಇಡುತ್ತಾರೆ ॥ ಪ ॥

ಮನಿಗೊಬ್ಬರೂ ಇರಿ ಹೇಳಿ ಮನಗೊಬ್ಬರ ಬರ ಹೇಳಿ
ಬಂಡಿಯವರೇ ಹತ್ತುತ್ತಾರೆ
ಗಾಳಿನೇ ಬೀಸುತಿವೆ ಮರನಾವಾಲಾಡುತಿವೆ
ದಾವಣಗೇರಿಗೆ ಹೋಗುತ್ತಾರೆ ॥ ಪ ॥

ಬಂಡಿಯ ಕೊಳ್ಳ ಹರುದಾರೆ
ಸಣ್ಣ ಮಳಿಗ್ಯಾಗೆ ಹೊಡಿದಾರೆ
ಸಣ್ಣ ಮಳಿಗ್ಯಾಗೆ ನಡೆದಾರೆ ॥ ಪ ॥

ಸಣ್ಣ ಮಳಿಗ್ಯಾಗೆ ತಣ್ಣನೇ ಕುಂತುಗ್ಹೊಂಡೆ
ಫಕ್ಕಿರವ್ವಗ ಜವಳಿ ತೆಗಿಸ್ಯಾರೆ
ದೊಡ್ಡೇನಾ ಮಳಿಗ್ಯಾಗೆ ದೊಡ್ಡವರು ಕುಂತುಗ್ಹೊಂಡೆ
ದಂಡ್ಯಾಣ್ಣಗ ಜವಳಿ ತೆಗಿಸ್ಯಾರೆ ॥ ಪ ॥

ಬಟ್ಟೆ ವಸ್ತ್ರಗಳ ಕೊಳ್ಳುತ್ತಾರೆ
ವಡವೆ ವಸ್ತ್ರಗಳ ಕೊಳ್ಳುತ್ತಾರೆ
ಕಡಗ ಕಾಲುಂಗುರ ಕೊಳ್ಳುತ್ತಾರೆ
ಕರಿಮಣಿ ತಾಳಿ ಕೊಳ್ಳುತ್ತಾರೆ ॥ ಪ ॥

ಕಸಣಿ ಕರಿ ಪಾವ ಕೊಳ್ಳುತ್ತಾರೆ
ಬಂಡಿಗೆ ಅವರೇ ಏರುತ್ತಾರೆ
ಊಟವ ಅವರೇ ಮಾಡುತ್ತಾರೆ
ಊಟಗಳ ಅವರೇ ಮಾಡುತ್ತಾರೆ ॥ ಪ ॥

ಕೈಗಳ ಅವರು ತೊಳೆದಾರೆ
ಚಂದಾಗಿ ವಿಳ್ಯಾವ ಮಿಲುದಾರೆ
ಬಂಡಿಯ ಕೊಳ್ಳ ಕಟ್ಟುತ್ತಾರೆ ॥ ಪ ॥

ಅಲ್ಲಿಗೆಯ ಹೊಲದ ಮ್ಯಾಲೆ ನೋವಿನ ಮೊದಲು ಮಾಡಿ
ಅರಸಿಕೇರಿಗೆ ಬರುತ್ತಾರೆ

ಗಾಳೇನೆ ಬಿಸುತಿವೇ ಮರನಾವಾಲಾಡುತಿದೆ
ಗುಡಿ ಮುಂದಾಕ ಬಂಡಿ ತರುಬ್ಯಾರೆ ॥ ಪ ॥

ಬಂಡಿಯ ಕೊಳ್ಳ ಅರುದಾರೆ
ಅಕ್ಕಿ ನುಚ್ಚುಗಳ ಇಳಿವ್ಯಾರೆ
ಗುಡಿಯಾಗ ನಿಟ್ಟು ಹಾಕುತ್ತಾರೆ
ಮನೆಗೊಬ್ಬರೇ ಹಿರಿಯವರೇ ಮನಿಗೊಬ್ಬರೇ ಬರಹೇಳಿ ॥ ಪ ॥

ಅಕ್ಕಿನುಚ್ಚುಗಳ ಮಾಡುತಾರೆ
ಗುಡಿಯ ಗುಂಡಾರ ಬಳಿದಾರೆ
ಜೋಡೆರಡು ಬಂಡಿ ಕಟ್ಟಿಸ್ಯಾರೆ
ಗುಂಡುಗತ್ತಿಗೆ ಕಳಿವ್ಯಾರೇನೆ ॥ ಪ ॥

ಜೋಡೆರಡು ಬಂಡಿಗಳ ಕಟ್ಟಿಕೊಂಡೆ ಅವರಿನ್ನು
ಗುಂಡುಗತ್ತಿಗೆ ಹೋಗುತ್ತಾರೆ
ಗಾಳಿನೇ ಬಿಸುತಿಗೆ ಮರನಾ ವಾಲಾಡುತಿದೆ
ಗುಂಡಗತ್ತಿ ಹೋಗುತಾರೆ ॥ ಪ ॥

ಭರಮನು ಗೌಡರು ಇದುರಿಗೆ
ಯಾವುರೋರೆಂದು ಕೇಳುತ್ತಾರೆ
ಅರಸಿಕೇರಿಯರೆಂದು ಹೇಳುತ್ತಾರೆ
ಯಾತಕ ನೀವು ಬಂದಿದ್ದೀರಾ ॥ ಪ ॥

ದಂಡ್ಯಾಮ್ಮನ ಹೇ ಮಗನಾ ಮದುವಿಯ ಆಗುತಾನೋ
ಹಂದರ ಗರಿಯ ಕೊಡಬೇಕು
ಎಳಪಿನ ಕಾಯ ಕೊಡಬೇಕೋ
ಕಳಸ ಕೊಂಬಾಳೆ ಕೊಡಬೇಕೋ ॥ ಪ ॥

ಬಂಡಿಗೆ ಅವರೇ ಏರುತ್ತಾರೆ
ಬಂಡಿಗೆ ಹೇ ಅವರೇ ಎರ‍್ಯಾರೇ ಮಾತಾಡಿ
ಅತ್ತತ್ತಾ ಹೋಗಿ ಕಳುವ್ಯಾರೆ ॥ ಪ ॥

ಅಲ್ಲಿಂದ ಹೋದ ಮ್ಯಾಲ ಮುಂದೆ ಮಾಡಿ ಅರಸಿಕೆರಿಗೆ ಬರುತ್ತಾರೆ
ಗುಡಿಯ ಮುಂದಾಕ ಬಂಡಿ ತರುಬ್ಯಾರೆ
ಬಂಡಿಯ ಕೊಳ್ಳ ಅರುದಾರೆ
ಎಳಪಿನ ಕಾಯ ಇಳಿವ್ಯಾರೆ ॥ ಪ ॥

ಕಳಸಕ್ಕೊಂಬಾಳೆ ಇಳಿವ್ಯಾರೆ
ಮನೆಗೊಬ್ಬರ ಹಿರಿಯರೇ ಮನಗೊಬ್ಬರ ಬರ ಹೇಳಿ
ಗುಡಿಯ ಮುಂದಾಕ ಅವರೇ ಬರುತ್ತಾರೆ
ಹಂದರ ಅವರೇ ಹಾಕುತ್ತಾರೆ ॥ ಪ ॥

ಹಂದರ ಪೂಜೆ ಮಾಡುತ್ತಾರೆ
ಬೆಳ್ಳಾನೇ ಬಳ್ಳುತನಕ ದೇವರ ಕಾರ‍್ಯಾವ ಮಾಡಿ
ಬೆಳ್ಳಿ ಮುಡುದಕ ಮದುಮಗ
ಬೆಳ್ಳಿ ಮುಡುತಿದೆ ಹೇ ಮದುಮಗ ಮಾಡ್ಯಾರೆ ॥ ಪ ॥

ಹಡಗಲಿಗ ಫಕ್ಕೀರವ್ವ ಮದು ಮಗಳೇ
ಕೋರೂಟ ದಂಡ್ಯಾಣ್ಣ ಉಣುತಾನೆ
ಒತ್ತುಗಳು ಮುಳುಗ್ಯಾವೆ ಕತ್ತಲ ಆಗ್ಯಾವೆ
ಬಿಗರ ಬಂಡಿ ಬರಲಿಲ್ಲ ॥ ಪ ॥

ಜೋಡ ಆಳು ದಂಡ್ಯಾಣ್ಣ ಕಳುವ್ಯಾನೆ
ಎದುರಿಗೆ ಬಿಗರೇ ಬರುತಾರೆ
ಬಿಗರ ಕರಕಂದೇ ಬರುತಾರೆ
ಮನಿಗೊಂದೋಂದು ಕಳಸವ ಉಡ್ಯಾರೆ ಅವರಿನ್ನು ॥ ಪ ॥

ಜೋಡು ಹಲಗೆ ಓಡಿಸ್ಯಾರೆ
ಬಿಗರನು ಎದುರುಗೊಂಡು ಬರುತಾರೆ

ಬಿಡದಿಯ ಮನೆಯ ಕೊಡುತಾರೆ
ಊಟ ಉಪಚಾರ ಮುಗಿಸ್ಯಾರೆ ॥ ಪ ॥

ಇಳೇವ ಅವರೇ ಹೊಡೆದಾರೆ
ಬೆಳ್ಳನೇ ಬೆಳ್ಯಾತನಕ ಎಲ್ಲಾ ಕಾರ್ಯವ ಮಾಡಿ
ಬೆಳ್ಳಿ ಮುಡುತಿಗೆ ಸುರುಗಿ ನೀರೇ
ಗಂಗೆಯ ನೀರಾ ತರುತಾರೆ ॥ ಪ ॥

ಗಂಗೆಯ ನೀರಾ ಹಂದರಕೆ ತರುತಾರೆ
ಸುರುಗೀಯ ಅವರೇ ಸುತ್ತುತ್ತಾರೆ
ದಂಡ್ಯಾಣ್ಣನ ಮದು ಮಗನ ಮಾಡುತಾರೆ
ಅಕ್ಕ ತಂಗಿಯರು ಬರುತಾರೆ ॥ ಪ ॥

ದಂಡ್ಯಾಣ್ಣನ ಸುರುಗಿಗೆ ಹೋಗುತಾರೆ
ದಂಡ್ಯಾಣ್ಣಗ ಸುರುಗಿ ಎರುದಾರೆ
ದಂಡ್ಯಾಣ್ಣಗ ಸುರುಗಿ ಮುಗಿದಾವೆ
ಕೈಯಾಗ ಜವಳಿ ಕೊಡುತಾರೆ ॥ ಪ ॥

ಸುರುಗಿಯ ನೀರ ಬರುತಾರೆ
ಫಕ್ಕೀರವ್ವನ ಮದು ಮಗಳ ಮಾಡುತ್ತಾರೆ
ಅಕ್ಕ ತಂಗಿಯರೇ ಬರುತಾರೆ
ಸುರುಗಿಯ ನೀರ ಎರೆದಾರೆ ॥ ಪ ॥

ಕೈಲಾಗ ಜವಳಿ ಕೊಡುತಾರೆ
ಸುರುಗಿಯ ಬಟ್ಟೆ ಬರುತಾರೆ
ಕಡಗ ಕಾಲುಂಗುರ ಇಡಿಸ್ಯಾರೆ
ಉಡಿ ಹಕ್ಕಿ ಅವರೇ ಓತ್ತುತಾರೆ ॥ ಪ ॥

ದಾರಿಯಾರಿಯಾಕೆ ಹೋಗುತ್ತಾರೆ
ದಾರಿಯರಕಂಡೆ ಬರುತಾರೆ
ಮದುವ ಹಂದರಕೆ ನಿಲ್ಲತಾರೆ
ಇಪ್ಪತ್ತು ವರ್ಷದ ಕೊಪ್ಪಡದೇ ಸಕಲ್ಲ ॥ ಪ ॥

ನಿತ್ತಿ ಫಕ್ಕೀರವ್ವ ಇವ್ನ ಮೆಟ್ಟಿ
ನಿತ್ತೇನೆ ಫಕ್ಕೀರವ್ವ ಇವ್ನ ಮೆಟ್ಟಿ ದಂಡ್ಯಾಣ
ಮುತ್ತಿನ ಬಾಸಿಂಗ ಸಿಗಲಾರದೇ
ಹನ್ನೆರಡು ವರ್ಷದ ಹೆಣ್ಣು ವಡೆವೆಸಕಲ್ಲ ॥ ಪ ॥

ತಂಗೀಫಕ್ಕೀರವ್ವ ಇವ್ನ ಮೆಟ್ಟಿ
ತಂಗೆನೆ ಫಕ್ಕೀರವ್ವ ಇವ್ನ ದಂಡ್ಯಾಣ್ಣನ
ಬಣ್ಣದ ಬಾಸಿಂಗ ಸಿಗಲಾರದೇ
ಗರತಿಯ ಹಕ್ಕಿಗಳ ಹೋಗುದಾರೆ ॥ ಪ ॥

ಮಂಗಳ ಸೂತ್ರವ ಕಟ್ಟುತಾರೆ
ದೊಡ್ಡ ಹಕ್ಕಿಯ ಬಾನ ಹುಗ್ಗಿ ಹೋಳಿಗೆ ಮಾಡಿ
ಮದ್ಯಾಹ್ನ ಭೂಮಕ್ಕೆ ಅಣಿ ಮಾಡೇ
ಸಣ್ಣಾ ಹಕ್ಕಿಯ ಬಾನ ಎಣ್ಣಿ ಹೋಳಿಗೆ ಮಾಡಿ ॥ ಪ ॥

ಹೆಣ್ಣಿನ ಭೂಮಕೆ ಅಣಿ ಮಾಡೇ
ಬ್ರಹ್ಮ ಗಂಟುಗಳ ಹೊಡುದಾರೆ
ಹೊಳಿಯಾಕ ಕರಕಂಡೆ ಹೋಗುತಾರೆ
ಅವರಾ ಗಂಟಾ ಅವರೇ ಎಳಿಸ್ಯಾರೆ ॥ ಪ ॥

ಗಂಡ ಹೆಂಡಿರನಾ ಕುಂದ್ರೀಸ್ಯಾರೆ
ಹಸಿ ಹಕ್ಕಿಯ ಮಗಿಯಾ ಇಡುದಾಳೆ ದಂಡ್ಯಾವ್ವ
ಹಾಡೊಂದು ವ್ರತವ ಬರೆದಾಳೆ
ಮಲ್ಲಿಗೆ ಹೂವಿನ ರಸಿಯ ಬರುದಾಳೆ ॥ ಪ ॥

ಗಂಡ ಹೆಂಡಿರನ್ನ ಕುಂದ್ರಿಸ್ಯಾರೆ
ಕಟ್ಟಿದ ಬಾಸಿಂಗ ಬಿಚ್ಚಿಲ್ಲ
ಕಂಕಣದ ಕೈಯ ಬಿಚ್ಚಿಲ್ಲ ದಂಡ್ಯಾಣ್ಣ
ಬಾಗಲಿಗೆ ಶಮನ ಬರುತಾವೆ ॥ ಪ ॥

ಒಕ್ಕಲಿಗೆ ಶಮನ ಬರುತಾವೆ
ಒಕ್ಕಲಿಗ ಶಮನ ಬಂದಾವೆ ದಂಡ್ಯಾಣ್ಣ
ಅವರ ಅಕ್ಕ ತಂಗಿಯರದೇ ಶಿವಗೋಳೆ
ಅವರ ತಾಯಿ ಮಕ್ಕಳದೇ ಶಿವ ಗೋಳೆ ॥ ಪ ॥

ಜೋಡಣ್ಣನ ಮನಿಗೆ ಕಳುವ್ಯಾರೆ
ಜೋಡಣ್ಣನ ಮನಿಗೆ ಕಳುವ್ಯಾರೆ
ಜೋಡಣ್ಣನ ಮನಿಗೆ ಬರುತಾರೆ
ಜೋಡಾಳಿ ಅವರೇ ಬರುತಾರೆ ॥ ಪ ॥

ಅಮ್ಮನ ಮನೆಗೆ ಹೇಳುತಾರೆ
ಕಟ್ಟಿದಾ ಬಾಸಿಂಗಾ ಬಿಚ್ಚಿಲ್ಲಾ ದಂಡ್ಯಾಣ್ಣ
ಹೊಸ್ತಿಲಿಗೆ ಶಮನ ಬಂದುದ್ದಾವೆ
ಗೌಡರ ಮುಂದೆ ಹೇಳುತ್ತಾರೆ ॥ ಪ ॥

ಬತ್ತಲ ಗುದುರೆ ಹೇರ್‍ಯಾನೇ ಮಲ್ಲಗೌಡ
ಅರಸಿಕೇರಿಗೆ ಹೋಗುತಾನೆ
ಗಾಳಿನೇ ಬಿಸುತಿಗೆ ಮರನಾವಾಲಾಡುತಿಗೆ
ಗುಡಿ ಮುಂದೆ ಕುದುರೆ ತರುಬ್ಯಾನೆ ॥ ಪ ॥

ಗುಡಿ ಮುಂದೆ ಗೌಡರೇ ಇಳಿದಾರೆ
ಗುಡಿ ಮುಂದೆ ಅವರೇ ಇಳಿದಾರೆ
ಇತ್ತ ಬನ್ನಿ ಜುವಾನರೇ ಮತ್ತೊಂದು ಹೇಳೇನ
ಈಗಿದ್ದಿ ಏಕೆ ಹೋಗಿ ಬರೋ ॥ ಪ ॥

ಈಗಿನ ವ್ಯಾಳಾಕ ಬರೋ
ಈಗಿನ ವ್ಯಾಳಾಕ ಹೋಗಿ ಬರೋ ಗೌಡರೇ ನಷ್ಟೆ ಪುಡಿ ತರಕ್ಕೆ ಕೊಡು
ನಮಗೆ ತಂಬಾಕದ ಖರ್ಚು ಕೊಡು ನಮಗೆ
ತಂಬಾಕ ಹೇ ಖರ್ಚು ದಂಬಾಳು ಕೊಡೊದಿಲ್ಲೋ ॥ ಪ ॥

ಹಿಗೇನಾ ವ್ಯಾಳ್ಯಾಕ ಹೋಗಿಬರೋ
ಇಂದಕ್ಕೆ ಜವಾನರು ಹೋಗುತಾರೆ
ಇತ್ತ ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನ
ಚಂದದಿಂದ ಮದುವೆ ಆಗೂ ಹೋಗೋ ॥ ಪ ॥

ಬತ್ತಲ ಹೇ ಕುದುರೆ ಹೇರ್‍ಯಾನ ಹನುಮನ ಗೌಡ
ನಿಚ್ಚವನಹಳ್ಳಿಗೆ ಬರುತಾನೆ
ಅರಸಿಕೇರಿ ಮನಿ ಇಡಿದಾಳೆ ದಂಡ್ಯಾವ್ವ
ಹಾಡೊಂದು ವ್ರತವ ಬರುದಾಳೆ ॥ ಪ ॥

ಹಡದವ್ವ ನಸಿಯ ಬರದಾಳೆ
ಗಂಡ ಹೆಂಡರನಾ ಕಳುಸ್ಯಾರೆ
ಎಲ್ಲಾ ಕಾರ್ಯವ ಮುಗಿದಾವೆ
ಎಲ್ಲೇನಾ ಕಾರ್ಯವಾ ಮುಗಿದಾವೆ ಆಗಿನ್ನೂ ॥ ಪ ॥

ಬಿಗರು ಊರಿಗೆ ಹೋಗುತ್ತಾರೆ
ದಂಡ್ಯಾಣನವರೇ ಕರೆದಾರೂ
ದಂಡ್ಯಾಣ್ಣನ ಮನಗೆ ಹೋಗಲಿಲ್ಲ
ಅರೇ ಗಾವದೇ ನೆಲ ಮೂರೇಗಾವದ ಮಾಡಿ ॥ ಪ ॥

ಬಿಗರು ಊರಿಗೆ ಹೋಗುತಾರೆ
ದಂಡ್ಯಾಣ್ಣನವರೇ ಕರುದಾರೆ
ದಂಡ್ಯಾಣ್ಣನ ಮನಿಗೆ ಹೋಗಲಿಲ್ಲ
ಆರೇಗಾವದ ನೆಲ ಮೂರೇಗಾವದ ಮಾಡಿ ॥ ಪ ॥

ಬಿಗರು ಊರಿಗೆ ಹೋಗುತಾರೆ
ಅಲ್ಲಿಂದ ದಂಡ್ಯಾಣ್ಣನ ಎಲ್ಲಿಗೆ ಹೋದಾನೆ
ದಂಡ್ಯಾಮ್ಮನ ಗುಡಿಗೆ ಹೋಗುತಾನೆ
ಕರಿಯೇನಾ ಕಂಬಳಿ ಮುರಿದು ಗದ್ದಿಗೆ ಮಾಡಿ ॥ ಪ ॥

ಕಂಬಳಿಯ ಮ್ಯಾಲೆ ಮಲಿಗ್ಯಾನೆ
ಹಡದವ್ವ ಶಾಪುನಕೆ ಬರುತಾಳೆ
ಇತ್ತ ಬಾರೋ ನನ ಮಗನೇ ಮತ್ತೊಂದು ಹೇಳೇನೆ
ಬಂಡಿಯ ಕೊಳ್ಳ ಕಟ್ಟುತಾನೆ ॥ ಪ ॥

ಬಂಡ್ಯಾಗ ದಂಡ್ಯಾಣ್ಣ ಕುಳುತಾನೆ
ಆರೇಗಾವದ ನೆಲ ಮೂರೇಗಾವದ ಮಾಡಿ
ಅರಸಿಕೆರಿಗೆ ಬರುತಾನೆ
ಗಾಳೇನಾ ಬಿಸುತಿಗೆ ಮರನಾವಾಲಾಡುತಿವೆ ॥ ಪ ॥

ಗುಡಿ ಮುಂದೆ ಬಂಡಿ ತರುಬ್ಯಾನೆ
ಬಂಡಿಯ ಕೊಳ್ಳ ಅರುದಾನೆ
ಸಮದ್ಯಾಕ ಬಂಡಿ ಹೊಡಿಸ್ಯಾನೆ
ಮಳಿಗ್ಯಾಕೆ ಎತ್ತು ಕಟ್ಟುತಾನೆ ॥ ಪ ॥

ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ನಡೆದಾನೆ
ಹಡೆದವ್ವ ಮನಗೆ ನಡೆದಾನೆ
ಕೈ ಕಾಲು ಮೊಕವ ತೊಳೆದಾನೆ
ಹೊಳಿಯಾಗ ದಂಡ್ಯಾಣ್ಣ ಹೋಗುತಾನೆ ॥ ಪ ॥

ಊಟಕ್ಕೆ ಅವರ ಅವ್ವ ಕರುದಾಳೆ
ಊಟಕ್ಕೆ ದಂಡ್ಯಾಣ್ಣ ಮಾಡದಿಲ್ಲ
ಉಣ್ಣವುದ್ಯಾರಿಗೆ ಬೇಕೆ ಉಡುವುದು ಯಾರಿಗೆ ಬೇಕೆ
ನನ್ನ ಹೆಜ್ಜೆವು ನನಗೆ ಸಿಗುವತನಕ ॥ ಪ ॥

ಎದ್ದು ಬಾರೋ ನನ ಮಗನೆ ಮತ್ತೊಂದು ಹೇಳೇನು
ಹೆಜ್ಜೇವುದ ಸುದ್ದಿ ಹೇಳು ಬಾರೋ
ಮದುವೆ ಆಗಿ ನಾನೇ ಹೋಗಬೇಕೋ
ತಿಂಗಳಾನುಸಾರ ಇಟ್ಟುದಾರೆ ॥ ಪ ॥

ನಾನಾಗ್ಯಾರು ಹಣವ ಕೊಡುತಾರೆ
ನಾನಾಗ್ಯಾರು ಮದುವಿ ಮಾಡುತಾರೆ
ಒಲ್ಲೆ ಸುರಿಗೆಂತೆ ಅಳುತಾನೆ
ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ನಡೆದಾನೆ ॥ ಪ ॥

ಹಡದವ್ವ ಮನಗೆ ನಡೆದಾನೆ
ಕರಿಯೇನಾ ಕಂಬಳಿ ಮುರಿದು ಗದ್ದಿಗೆ ಮಾಡಿ
ಕಂಬಳಿಯ ಮ್ಯಾಲೆ ಮಾಲಿಗ್ಯಾನೆ
ಹಡದವ್ವ ಸಾಪುನಕೆ ಬರುತಾಳೆ ॥ ಪ ॥

ಎನೋಂದು ನೋವು ಹೇಳುತಾಳೆ
ತಿಂಗಳನುಸಾರ ನೀನು ನಟ್ಟು ಬಂದಿಯೋ
ಹ್ಯಾಳ್ಯಾವು ನಿನಗೇ ಆಗುತಾವೋ
ಮದುವ್ಯಾಗಿ ನೀನು ಹೋಗು ಬಾರೋ ॥ ಪ ॥

ಯಾವಲ್ಲಿಗೆ ನಾನೇ ಹೋಗಲವ್ವ
ನನಗೆ ಯಾರು ಹಣವ ಕೊಡುತಾರೆ
ಎದ್ದು ಬಾರೋ ನನ ಮಗನೇ ಮತ್ತೊಂದು ಹೇಳೇನು
ನಿಚ್ಚವನಳ್ಳಿಗೆ ಹೋಗೋ ಬಾರೋ ॥ ಪ ॥

ಯಾರ ಮನಗೆಂದೇ ಹೋಗಲವ್ವ
ಎಡಕ್ಕೆ ಊರು ಬಿಟ್ಟು ಬಲಕ್ಕೆ ಕೆರಿ ಬಿಟ್ಟು
ಹನುಮನಗೌಡರ ಮನಿಗ್ಹೋಗೊ
ಧರ್ಮದ ಹಣವ ಕೊಡುತಾರೋ ॥ ಪ ॥

ಮದುವೆ ಆಗಿ ನೀನು ಹೋಗುವಂತೋ
ಅಂದಾಳೆ ಹಾಡ್ಯಾಡಿ ಮಗನಿಗೆ ಹೇಳೇಳೇ
ಮಯವಾದಳೇ ಮುಳಾಲಾಗಿ
ಮೈ ಮುರಿದು ಮ್ಯಾಕೆ ಹೇಳುತಾನೆ ॥ ಪ ॥

ಪನ್ನೀರಲಿ ಮೊಕವ ತೊಳೆದಾನೆ
ಕರಿಯೇನಾ ಕಂಬಳಿ ಒಗೆದು ಮ್ಯಾಲಾಕಿ
ನಿಚ್ಚವನಳ್ಳಿಗೆ ನಡೆದಾನೆ
ಎಡಕ್ಕೆ ಊರು ಬಿಟ್ಟು ಬಲಕ್ಕೆ ಕೆರಿ ಬಿಟ್ಟು ‖ ಪ ‖

ಹನುಮನಗೌಡರ ಮನಿಗ್ಹೋಗೋ
ಕಟ್ಟಿಯ ಹೆ ಮ್ಯಾಲೆ ಕುರಿತು ನೋಡುತಾನೆ
ಹನುಮನಗೌಡರು ದಂಡ್ಯಾಣ್ಣ ಬರುವುದಾ ನೋಡುತಾನೆ
ಗೌಡ್ರಿಗೆ ಸಾಲಾಮು ಮಾಡುತಾನೆ ‖ ಪ ‖

ಎದ್ದು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನು?
ಹೆಜ್ಜೆವುದ ಸುದ್ದಿ ಹೇಳು ಬಾರೋ
ತಿಂಗಳಾನುಸಾರ ಮನೆ ಬಿಟ್ಟು ಬಂದೆನೋ
ಮದುವ್ಯಾಗಿ ನಾನೇ ಹೋಗಬೇಕು ‖ ಪ ‖

ಹಡೆದವ್ವ ಹೇಳಿ ಕಳುವ್ಯಾಳೋ
ಊಟಕ್ಕೆ ದಂಡ್ಯಾಣ್ಣನ ಕರೆದಾರೆ
ಊಟಕ್ಕೆ ದಂಡ್ಯಾಣ್ಣನ ಕರುದಾರೆ ಗೌಡರೇ
ನೀರು ಕೊಟ್ಟು ಊಟಕ್ಕೆ ನೀಡುತಾರೆ ‖ ಪ ‖

ಹೋಳಿಗೆ ಊಟವ ಮಾಡುತಾರೆ
ಒಂದಾ ನೊಂದೂಟವ ಗಿಂಡಿಲೇ ಕೈ ತೊಳೆದಾನೆ
ಚಂದವಿಳ್ಯಾವ ಮಿಲುದಾನೆ
ಕುಂತಿದ್ದ ಹನುಮನಗೌಡರು ಮೇಲಕ್ಕೆ ಎದ್ದಾನೆ ‖ ಪ ‖

ದೇವರ ಕೋಣೆಗೆ ನಡೆದಾನೆ
ಕೊಡಪಾನ ದನವ ಕೊಡುತಾನೆ
ಹೊನ್ನಿನ ಸೆರಗಿಗೆ ಸುರುವ್ಯಾನೆ
ಎದ್ದು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನು ‖ ಪ ‖

ಹೆಜ್ಜೆವು ನಿನ್ನಂತೆ ಆಗಲ್ಹೇಳು
ಕದಗ ಪತ್ರವ ಬರಿರೆಂದೆ
ಕದುಗ ಯಾರಿಗೆ ಬೇಕು ಪತುರವು ಯಾರಿಗೆ ಬೇಕು
ಧರ್ಮದ ಹಣವ ಕೊಟ್ಟರೇನು? ॥ ಪ ॥

ಧರ್ಮದ ಹಣವನ್ನು ಕೊಟ್ಟೇನು ದಂಡ್ಯಾಣ್ಣ
ಮದುವ್ಯಾಗಿ ನೀನು ಹೋಗಬೇಕು
ಮದುವಿಗೆ ಸಾಲನ ಕೊಡುತಾನೆ
ಹೋಗಿ ಬಾ ಅಂದೆ ಹೇಳುತಾನೆ ॥ ಪ ॥

ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಬಂದಾನೆ
ಮಾದರಗೇರಿಗೆ ಬರುತಾನೆ
ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೆ
ಕರಿಯಲಿಂಗಜ್ಜರ ಮನಗ್ಹೋದ ॥ ಪ ॥

ದಂಡ್ಯಾಮ್ಮ ಹೇ ಮಗ ದಂಡ್ಯಾಣ್ಣ ಬಂದನೆಂದು
ತುಂಬಿದ ಚರಿಗೆ ಕೊಡುತಾರೆ
ಊಟಕೆ ದಂಡ್ಯಾಣ್ಣಗ ಕರುದಾರೆ
ಗೌಡರ ಮನಿಯಾಗೆ ಮಾತಿದ್ರು ಈಗುಂಡು ಬಂದೆ ಹಸುವಿಲ್ಲ ॥ ಪ ॥

ಕರಿಯೇನಾ ಕಂಬಳಿ ಮುರಿದು ಗದ್ದಿಗೆ ಮಾಡಿ
ಕಂಬಳಿ ಮ್ಯಾಲೆ ಮಲಗ್ಯಾನೆ
ಹಡದವ್ವ ಸಾಮನಕೆ ಬರುತಾಳೆ
ತಿಂಗಳನುಸಾರ ನಿನ್ನಟ್ಟು ಬಂದಿಯೋ ॥ ಪ ॥

ಬ್ಯಾಳಿ ಹೋಳಿಗೆ ಆಗುತವೋ
ಮದುವ್ಯಾಗಿ ನೀನು ಹೋಗಿ ಬಾರೋ
ನಾನಾಗ್ಯಾರು ಮದುವೆ ಮಾಡುತಾರೋ
ನಾನಾಗ್ಯಾರು ಹೆಣ್ಣು ಕೊಡುತಾರೆ ॥ ಪ ॥

ಎದ್ದು ಬಾರೋ ನನ ಮಗನೇ ಮತ್ತೊಂದು ಹೇಳೇನೂ
ಹಡಗಲಿಗೆ ನಿನು ಹೋಗು ಬಾರೋ

ಹಡಗಲ್ಯಾಗ ಗಂಟು ಇಟ್ಟು ಬಾರೋ
ಮನಿಗೊಬ್ಬರು ಹಿರಿಯರೆ ಮನಿಗೊಬ್ಬರು ಬರ ಹೇಳಿ ॥ ಪ ॥

ನಿಚ್ಚವನಳ್ಳಿಯಾಗೆ ಕರುದಾನೆ
ಕರಿಯ ಕಂಬಳಿ ಗದ್ದುಗೆ ಮಾಡಿ
ಅರಸಿಕೇರಿಗೆ ಹೋಗುತಾರೆಮನಿಗೊಬ್ಬರು
ಹಿರಿಯರೇ ಮನಿಗೊಬ್ಬರ ಬರ ಹೇಳಿ ॥ ಪ ॥

ಬಂಡಿಯ ಅವರೇ ಹತ್ತುತ್ತಾರೆ
ಆರೆಗಾವುದ ನೆಲ ಮುರೆ ಗಾವುದ ಮಾಡಿ
ಹಡಗಲಿಗೆ ಅವರೇ ಹೋಗುತಾರೆ
ಹಡಗಲಿಗೆ ಹೇ ಅವರೇ ಹೋದರೆ ಅವರಿನ್ನೂ ॥ ಪ ॥

ಹಡಗಲಿಗೆ ಮಾರಿ ಇದುರಿಗೆ
ಯಾವುರೋರೆಂದೇ ಕೇಳುತಾರೆ
ಅರಸಿಕೇರೆಂದೇ ಹೇಳುತಾರೆ
ಯಾತಕೆ ನೀವು ಬಂದಿದಿರಾ ॥ ಪ ॥

ಕನ್ನೆಗೆ ನಾವು ಬಂದಿದ್ದೇವು
ದಂಡ್ಯಾಮ್ಮ ಮಠಕ್ಕೆ ನಡೆಬೇಕು ಅಂದ್ಹೇಳಿ
ಕನ್ಯೆಯ ನವು ಇಟ್ಟಿದ್ದೇವೋ
ಕನ್ನೆಯ ನಾವು ಇಟ್ಟಿದ್ದೇವೋ ಅಂದ್ಹೇಳಿ ॥ ಪ ॥

ಮನಿಗೆ ಕರಕಂದೇ ಹೋಗುತಾರೆ
ಮನಿಯಾಗ ಚರಿಗೆ ಕೊಡುತಾರೆ
ಕೈ ಕಾಲು ಹೇ ಮಾರಿ ತೊಳೆದಾರೆ
ಚಾಪಿಯ ಮ್ಯಾಲೆ ಕುಳಿತಾರೆ ॥ ಪ ॥

ಸ್ಯಾವಿಗೆ ಊಟ ಮಾಡುತಾರೆ
ಸ್ಯಾವಿಗೆ ಹೇ ಊಟ ಮಾಡಿರೇ ಅಂದರ

ನೀರಾ ಕೊಟ್ಟು ಊಟಕೆ ನೀಡುತಾರೆ
ಒಂದಾನೊಂದೂಟವ ಮುಗಿಸಿ ಗಿಂಡಿಲೆ ಕೈ ತೊಳೆಲಾರೆ ॥ ಪ ॥

ಚೆಂದಾದ ವಿಳ್ಯಾವ ಮೆಲುದಾರೆ
ಮನಿಗೊಬ್ಬರ ಹಿರಿಯರೇ ಹೆ ಮನಿಗೊಬ್ಬರ
ಬರ ಹೇಳಿ ಹಡಗಲಿಗೆ ಕಳುವಾರೆ
ಮನಿಗೊಬ್ಬರಂತೆ ಬರುತಾರೆ ॥ ಪ ॥

ಎಲ್ಲಾರು ಅವರೇ ಬರುತಾರೆ
ಮಾತು ಕಥೆಗಳ ಮಾಡುತಾರೆ
ಒಡವೇ ವಸ್ತ್ರಗಳೇ ಮಾತುಕಥೆ
ಸೀರೆಕುಪ್ಪಸದ ಮಾತುಕಥೆ ॥ ಪ ॥

ತೆರನಾ ವರನಾ ಮಾತುಕಥೆ
ಮಾತು ಕಥೆಗಳು ಮುಗಿಸ್ಯಾರೆ
ಎದ್ದೇ ಬಾರೋ ಬಿಗರೇ ಮತ್ತೊಂದು ಹೇಳೇವು
ಹೆಜ್ಜೆವುಕೆ ನಾವು ನಂತಿದ್ದೇವು ॥ ಪ ॥

ಹೆಜ್ಜೆವುಕೆ ನಾವು ಹೋಗುತ್ತೇವೆ
ಅಲ್ಲಿಗೆ ನೀವು ಬರಬೇಕೋ
ಮಾತು ಕಥೆಗಳು ಮುಗಿಸಾರೆ
ಊರಿಗೆ ಅವರೇ ಹೊಂಟರೇ ॥ ಪ ॥

ಗುಡಿಯ ಬಾಗುಲ ತೆಗಿಸ್ಯಾನೆ
ಗುಡಿಯ ಬಾಗುಲ ತೆಗಿಸ್ಯಾನೆ ದಂಡ್ಯಾಣ್ಣ
ಸಮದ್ಯಾಳನ ಬಂಡಿ ಉಡಿಸ್ಯಾನೆ
ಬಂಡಿಯ ಪೂಜೆ ಮಾಡುತಾನೆ ॥ ಪ ॥

ಬಂಡಿಯ ಹೇ ಪೂಜೆ ಮಾಡ್ಯಾನೆ ಹೇ ದಂಡ್ಯಾಣ್ಣ
ಮನಸ್ಪೂರ್ತಿ ಬಂಡಿಯು ಓಡುತಾವೆ
ಬಂಡಿಯ ಬಲದಿಂದ ಓಡ್ಯಾವೆ ದಂಡ್ಯಾಣ್ಣ
ಮನಸ್ಪೂರ್ತಿ ಬಂಡಿಯ ಓಡಿಸ್ಯಾನೆ ॥ ಪ ॥

ಮಳಿಗ್ಯಾಗ ಹೋರಿ ಹೊಡುದಾನೆ
ಬಂಡಿಯ ಕೊಳ್ಳ ಕಟ್ಟುತಾನೆ
ಬಂಡಿಯ ಮೆಲ್ಲ ಅತ್ತುತಾನೆ
ಹಿಂದೆ ಬರುವವರೆಲ್ಲ ಮುಂದೆ ಬರುವವರೆಲ್ಲ ॥ ಪ ॥

ನಡು ಪ್ಯಾಟಾಗ ಬಂಡಿ ಬಿಡುತಾನೆ
ತುಸು ಮನವರು ನಿಂತೆ ನೋಡುತಾರೆ
ಹಸಿ ನಗೆಯ ಅವರೇ ನಗುತಾರೆ
ಆರೇ ಗಾವದ ನೆಲ ಮೂರೇ ಗಾವದ ಮಾಡೇ ॥ ಪ ॥

ಬಂಡಿ ದಂಡ್ಯಾಣ್ಣ ಹೊಡೆದಾನೆ
ತುಸು ಮನವರು ನಿಂತೆ ನೋಡುತಾರೆ
ಎಂಟು ಮಂದಿ ಕಳ್ಳರನ ಕರುದಾನೆ
ಎಂಟೇನಾ ಮಂದಿಯ ಕಳ್ಳರ ಕರೆದಾನೆ ದಂಡ್ಯಾಣ್ಣ ॥ ಪ ॥

ಎಂಟು ನೂರು ರೂಪಾಯಿ ಕೊಡುತಾನೋ
ದಂಡ್ಯಾಣ್ಣನ ಕಳುವಿ ಬರಿರೆಂದ
ವರುಷ ಒಂದಾದಿನ ಸುಮ್ಮನದ್ದರೆ ಎಂಟಾ
ನೂರು ರೂಪಾಯಿ ಸಿಗೊದಿಲ್ಲ ॥ ಪ ॥

ಬಾಕಿನ ಒಡವೆ ಕೊಡುತ್ತೇನೆ
ದಂಡ್ಯಣ್ಣನ ಕಳುವಿ ಬರಿರೆಂದು
ಎಂಟು ಮಂದಿ ಕಳ್ಳರನ ಕಳುವ್ಯಾನೆ
ದಂಡ್ಯಾಣ್ಣನೇ ಬಂಡಿಯಿಂದ ಇಂದೇ ನಿಂತರೇ ॥ ಪ ॥

ಮಂದಿ ಮಕ್ಕಳೇ ಹೋಗುತಾರೆ
ಆ ಕಡೆ ಅವರೇ ಮಜುದಾರೇ
ದಂಡ್ಯಾಣ್ಣ ಬರುವುದೇ ನೋಡುತಾರೆ
ಹಗಲೊತ್ತೆ ಅವರೇ ಮಾಡುತಾರೆ ॥ ಪ ॥
ಚನ್ನಮ್ಮನೇ ಮ್ಯಾಲ ಇರುವಂತ ದಂಡ್ಯಾಣ್ಣಗ

ಬೆಳ್ಳಿ ನಾಗರವೇ ಆಗುತಾವೆ
ದಂಡ್ಯಾಮ್ಮ ಮದುವೆ ಆಗುತಾವೆ
ಕೇಳಿದ ವರ ಬೇಕೆ ಬರುತಾವೆ ॥ ಪ ॥

ಬೇಡಿದಾ ವರ ಬೇಕೆ ಬರುತಾಳೆ
ದೇವರ ಬಳಿಯಕೆ ಬಂದರೆ ದಂಡ್ಯಾಮ್ಮ
ಎಂಟು ಮಂದಿ ಕಳ್ಳರನ ನೋಡುತಾಳೆ
ಉಡಿಯಾಳ ಭಂಡಾರ ಉಗ್ಗುತಾಳೆ ॥ ಪ ॥

ಎಂಟು ಮಂದಿ ಕಣ್ಣೇ ಹೋಗುತಾವೆ
ಕಲ್ಲು ಮುಳ್ಳಗಳ ತುಳಿದಾರೆ
ಕಲ್ಲು ಬಂಡೆಗಳ ಹಾಯುತ್ತಾರೆ
ಇತು ಬಾರೋ ಮಕ್ಕಳೇ ಮತ್ತೊಂದು ಹೇಳೇನೆ ॥ ಪ ॥

ಹೊಸಪ್ಯಾಟಿ ಹಾದಿ ತೋರು ಬಾರ್ರೋ
ಇತು ಬಾರೆ ಹಡೆದವ್ವ ಮತ್ತೊಂದು ಹೇಳೇವೆ
ನಮಗೆ ಕಣ್ಣುಗಳೇ ಕಣಗಿಲ್ಲೇ
ಉಡಿಯಾಗಳ ಬಂಡರ ಉಗ್ಗುತಾಳೆ ॥ ಪ ॥

ಎಂಟುನೂರ ರೂಪಾಯಿ ಕೊಡುತ್ತೇವೆ
ನಮ್ಮ ಕಣ್ಣುಗಳೇ ಕಣಂಗ ಮಾಡೇ
ತೆಪುದಂಡರೇನು ಕೊಡುತೇವೋ
ನೀವು ಮುಟ್ಟಿದ ಬ್ಯಾಟಿ ಕಡಿಯುತ್ತೇವೆ ॥ ಪ ॥

ಉಡಿಯಾಳ ಬಂಡಾರ ಉಗ್ಗುತಾಳೆ
ಎಂಟು ಮಂದಿ ಕಣ್ಣೆ ಕಾಣುತ್ತಾವೆ
ಎಂಟು ನೂರು ರೂಪಾಯಿಕೊಡುತಾರೆ
ನಿನಮಗನೆಂಬುದು ಗೊರುತಿಲ್ಲೆ ಹಡೆದವ್ವ ॥ ಪ ॥

ಗೊರುತಿದ್ದರೆ ನಾವೆ ಬರುತಿದಿಲ್ಲೇ
ಹಡೆದವ್ನ ಕಾಲಿಗೆ ಬೀಳುತ್ತೇವೆ

ಊರಿಗೆ ತಿರುಗಿ ಹೋಗುತಾರೆ
ಕರಿಮಠದ ಐನೂರನ್ನ ಕರಕಂಡೆ ಬಸಣ್ಣ ॥ ಪ ॥

ಮುಂದೆ ಮುಂದೆ ತಾನೇ ಹೋಗುತ್ತಾನೆ
ಭೂಮಿನೇ ಆಕಾಶವಾಗಿ ಇರುವಂಗೇ ಬಂಧುಗಳು
ಅವರೇ ನಾಡುತಾರೆ
ಕೈಯಾಕೆ ಕುಂಡ್ಲಾ ಕೊಡುತಾವೆ ॥ ಪ ॥

ದಂಡ್ಯಾಣ್ಣನ ಬಂಡಿ ಬರುತಾವೆ
ಬಂಧುಗಳನ್ನು ನೋಡಿ ಹೊಗಳಿ ಹಾಡುತ್ತಾನೆ
ಹಾರೊಂದು ಹಾಡೆದಂಗೆ ಕರಿಯ ಗಿಡದಂಗೆ
ಕೌಜುಗದಕ್ಕಿ ದ್ವನಿ ತೋರೆ ॥ ಪ ॥

ಹತ್ತೊಂದು ಹಡೆದಾರೆ ಸುತ್ತಿನವೇನಾಗೆ
ಕೇಳು ಪಲ್ಯಕ್ಯಾ ಗೆದ್ವನಿ ತೋರೆ
ಬಂಧುಗಳನ್ನು ನೋಡಿ ಅಳುತ್ತಾನೆ
ಸುಟ್ಟ ಭಸ್ಮವ ಮಾಡುತ್ತಾಳೆ ॥ ಪ ॥

ಯುದ್ಧಕೆ ಬಂಡಿ ಬಿಡುತಾನೆ
ಭೂಮಿನೇ ಆಕಾಶದ ಏಕಾಗಿ ಬರುವಂತೆ
ಮುಳುಕಂಡಿ ಅವರು ಬಿಡುತಾರೆ
ದಂಡ್ಯಾಣ್ಣ ನೋಡಿ ಅಳುತಾನೆ ॥ ಪ ॥

ಹಾಳಾದ ರೆಂಡೇ ಕೊಡಲಿಲ್ಲ
ಬಂಡಿ ಮುಂದಕೆ ಹೋಡುದಾನೆ
ಬಂಡಿ ಭಸ್ಮಾವ ಮಾಡುತ್ತಾಳೆ
ಯುದ್ಧಕೆ ಬಂಡಿ ಹೊಡುದಾನೆ ॥ ಪ ॥

ಯುದ್ಧಕ್ಕೆ ಹೇ ಬಂಡಿ ಹೊಡುದಾನೆ ದಂಡ್ಯಾಣ್ಣ
ಹಾರಿ ಬಂಡಿಗಳ ಹತ್ತುತ್ತಾಳೆ
ತಾಯವ್ವಗ ನಾನು ಮಗನಲ್ಲೇ
ಇತು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನಾ ॥ ಪ ॥

ದಾರಿಯ ಮರೆತು ಬಂದುದೇನು
ಎಂಟು ನೂರೂಪಾಯಿ ತಂದಿದ್ದೇನು
ಮರಿತೇನು ಮಗನೇ ನನಕೂಟ
ಮುಂದಾಕೆ ಬಂಡಿ ಹೊಡುದಾನೆ ॥ ಪ ॥

ಕರಿಮಠದ ಐನೂರನ್ನ ಕರಕಂಡೆ ಬಸಣ್ಣ
ಬರಗೂರು ಹಳ್ಯನ್ಯಾ ಹೋಗುತಾರೆ
ಅದುರ್ಯಾಗೆ ರಂಗ ಹೊಡುದಾರೆ
ಭೂಮಿನೇ ಆಕಾಶದ ಏಕಾಗಿ ಬರುವಂತೆ ॥ ಪ ॥

ರಂಗವೇ ಅವರೇ ಹೊಡುದಾರೆ
ರಂಗಕ್ಕೆ ಬಂಡಿ ಹೊಡುದಾರೆ
ಹಗರಿ ಅಚ್ಚು ಮುರಿದಾವೆ
ಇತು ಬಾರೆ ಹಡೆದವ್ವ ಮತ್ತೊಂದು ಹೇಳೇನೋ ॥ ಪ ॥

ಹಗರಿಬೊಮ್ಮನಹಳ್ಳಿಗೆ ಹೋಗಿ ಬಾರೋ
ಬಂಡಿಯ ಅಚ್ಚು ಕೊಡುತಾರೋ
ಯಾರ ಮನಿಗೆಂದೇ ಹೋಗಲೆವ್ವ
ಎಡಕ್ಕೆ ಊರು ಬಿಟ್ಟು ಬಲಕ್ಕೆ ಕೇರಿಬಿಟ್ಟು ॥ ಪ ॥

ರಾಮನ ಗೌಡರ ಮನಿಗ್ಹೋಗೊ
ಬಂಡಿಯ ಅಚ್ಚು ಕೊಂಡು ತಾರೋ
ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೆ
ಹಗರಿಬೊಮ್ಮನಹಳ್ಳಿಗೆ ಹೋಗುತಾನೆ ॥ ಪ ॥

ಊರ ಸನಿಹಕೆ ಹೋಗುತಾನೋ
ರಾಮನಗೌಡರೇ ಇದುರಿಗೆ
ಯಾವುರೆಂದೇ ಕೇಳುತಾರೆ
ಅರಸಿಕೇರಿರೆಂದೆ ಹೇಳುತಾನೆ ॥ ಪ ॥

ಯಾತಕ ನೀವು ಬಂದಿದ್ದೀರೋ
ದಂಡ್ಯಾಮ್ಮ ಹೇ ಮಗ ದಂಡ್ಯಾಣ್ಣ ನಾನನ್ನು

ಹೆಜ್ಜವುಕ ನಾನು ಹೋಗಲಿದ್ದೋ
ಹಗರ್‍ಯಾಗೆ ಅಚ್ಚು ಮುರಿದ್ಯಾವ್ರೋ ॥ ಪ ॥

ಹಡದವ್ವ ಹೇಳಿ ಕಳುವ್ಯಾಳೋ
ಆಳು ಮಕ್ಕಳ ಕರುದಾನೇ
ಆಳನೇ ಮಕ್ಕಳನ ಕರುದಾನೆ ರಾಮನಗೌಡ
ಬಂಡಿಯ ಅಚ್ಚು ಕೊಡಿಸ್ಯಾನೆ ॥ ಪ ॥

ಮನಿಯಾಳ ಹೋರಿ ಇಡುದಾನೆ
ಹಗರಿಗೆ ಅವರೇ ಬರುತಾರೇ
ಬಂಡಿಯ ಅಚ್ಚು ತರುಸ್ಯಾರೆ
ಗೌಡರೇ ಹೋರಿ ಉಡಿದ್ದಾರೆ ॥ ಪ ॥

ಎತ್ತರದಿಂದೆತ್ತರಕೆ ಹೊಡುದಾರೆ
ಜಿಜಿಗಿದು ಹೋರಿ ಹಾರುತಾವೆ
ದಂಡ್ಯಾಣ್ಣನೆ ಹೋರಿ ಹುಡ್ಸಾರೆ ಮಕ್ಕಳೇ ॥ ಪ ॥

ಅತ್ತತ್ತ ಹೋಗಿ ಕಳುವ್ಯಾರೆ
ಅತ್ತತ್ತ ಹೇ ಹೋಗಿ ಕಳುವ್ಯಾರೆ ಮಕ್ಕಳೇ
ಹಿಂದಕೆ ತಿರುಗಿ ಬರುತ್ತಾರೆ
ಮುಂದಾಕೆ ಬಂಡಿ ಹೋಗುತ್ತಾವೆ. ॥ ಪ ॥

ಆರೇಗಾವದ ನೆಲ ಮೂರೇಗಾವದ ಮಾಡಿ
ಹೊಸಪ್ಯಾಟಿಗೆ ದಂಡ್ಯಾಣ್ಣ ಹೋಗುತ್ತಾನೆ
ಗಾಳೇನೆ ಬಿಸುತಿಗೆ ಮರನಾವಾಲಾಡುತಿಗೆ
ಕಛೇರಿಕಿ ಮುಂದೆ ಬಂಡಿ ಬಿಟ್ಟು ॥ ಪ ॥

ದಿಲ್ಲಿಯ ಜವಾನರೇ ನೋಡುತಾರೆ
ಯಾವುರೊರೆಂದು ಕೇಳುತ್ತಾರೆ
ಅರಸಿಕೇರಿರೆಂದೆ ಹೇಳುತ್ತಾನೆ.
ಇತ್ತ ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇವು ॥ ಪ ॥

ಬರೋ ತಿಂಗಳು ರಜೆವ ಹಾಕುತ್ತಾರೆ
ಬರೋ ತಿಂಗಳು ರಜೆವ ತೆಗೆದಾವೋ
ಮೂರಾ ತಿಂಗಳಿಗೆ ಬರೋ ಹೋಗೋ
ಹಿಂದಕ್ಕೆ ಬಂಡಿ ತಿರುವ್ಯಾವೆ ॥ ಪ ॥

ಇದಕ್ಕೆ ದಂಡ್ಯಾಮ್ಮ ಹೇಳುತ್ತಾಳೆ
ಇತು ಬಾರೋ ನನ ಮಗನೇ ಮತ್ತೊಂದು ಹೇಳೇನು
ಮಾವನವರು ಮೋಸ ಮಾಡುತಾರೋ
ಊರಿಗೆ ನೀನು ಹೋಗಬ್ಯಾಡೋ ॥ ಪ ॥

ಯಾವಲ್ಲಿಗೆ ನಾನೇ ಹೋಗಲವ್ವ
ಇತು ಬಾರೋ ನನ ಮಗನೇ ಮತ್ತೊಂದು ಹೇಳೇನೇ
ವಡ್ಡರ ದಂಡ್ಯಾಣ್ಣನ ಮನಿಗ್ಹೋಗೋ
ಹಡದ ಮಗನೆಂದೆ ಸಲುವ್ಯಾರೆ ॥ ಪ ॥

ಅಲ್ಲಿಂದ ದಂಡ್ಯಾಣ್ಣೆ ಎಲ್ಲಿಗೆ ಹೋದಾನೆ
ವಡ್ಡರ ದಂಡ್ಯಾಣ್ಣನ ಮನಿಗ್ಹೋದ
ಹಡದವ್ವ ಸಾಮುನಕ್ಕೆ ಬರುತ್ತಾಳೆ
ಇತು ಬಾರೊ ನನ್ನ ಮಗನೇ ಮತ್ತೊಂದು ಹೇಳೇನು ॥ ಪ ॥

ನೀರನರವರೇ ಹರಿದ್ಯಾವೋ
ಯಾವ ಊರಿಗೆ ನಾನೇ ಹೋಗಲವ್ವ
ನಿಚ್ಚನಳ್ಳಿಗೆ ಹೋಗೋ ಬಾರೋ
ಅಂದಾಳೆ ಹಾಡಾಡಿ ಮಗನಿಗೆ ಹೇಳ್ಯಾಳೆ ॥ ಪ ॥
ಮಯವಾದಳೇ ಮಳಲಾಗಿ
ಆರೇಗಾವದ ನೆಲ ಮೂರೇಗಾವದ ಮಾಡಿ
ನಿಚ್ಚವನಳ್ಳಿಗೆ ಬರುತ್ತಾನೆ
ನಿಚ್ಚವನಳ್ಳಿಯಲ್ಲಿ ಇರುತ್ತಾನೆ ॥ ಪ ॥

ಬಾಗಲಿಗೆ ಶಮನ ಬರುತಾವೆ
ದಂಡ್ಯಾಣ್ಣಗ ಶಮನ ಬರುತ್ತಾವೆ

ದಂಡ್ಯಾಣ್ಣನೆಂದೆ ಕರುದಾವೆ
ನಿಚ್ಚವನಳ್ಳಿಗೆ ಹೋಗಿದ್ದಾನೋ ॥ ಪ ॥

ಹಡದವ್ವ ಸಾಪುನಕೆ ಬರುತಾಳೆ
ಇತು ಬಾರೋ ನನ ಮಗನೇ ಮತ್ತೊಂದು ಹೇಳೇನು
ಈ ಊರಿಗೆ ನೀನು ವರಾವಾದೋ
ಯಾವೊಲ್ಲಿಗೆ ನಾನೇ ಹೋಗಲವ್ವ ॥ ಪ ॥

ಉಚ್ಚಂಗಿ ದುರ್ಗಕ್ಕೆ ಹೋಗು ಬಾರೋ
ಆರೇ ಗಾವದ ನೆಲ ಮೂರೇಗಾವದ ಮಾಡಿ
ಉಚ್ಚಂಗಿ ದುರ್ಗಕ್ಕೆ ಹೋಗುತ್ತಾನೆ
ಚಿಗವ್ವನ ಮನಿಗೆ ಹೋಗುತ್ತಾನೆ ॥ ಪ ॥

ಮಗನೇನೆ ದಂಡ್ಯಾಣ್ಣ ಬಂದಾನೇ ಅಂದ್ಹೇಳಿ
ತುಂಬಿದ ಚರಗಿ ಕೊಡುತಾಳೆ
ಕೈಕಾಲು ಮೊಕವ ತೊಳೆದಾನೆ
ಒಳಗ ದಂಡ್ಯಾಣ್ಣ ಹೋಗುತ್ತಾನೆ ॥ ಪ ॥

ಅಲ್ಲಿಂದ ಜವಾನರೇ ಎಲ್ಲಿಗೆ ಬಂದಾರೆ
ನಿಚ್ಚವನಳ್ಳಿಗೆ ಬರುತಾರೆ
ಬಾಗಲಲ್ಲಿ ದಂಡ್ಯಾಣ್ಣನ ಹುಡುಕ್ಯಾರೇ
ಉಚ್ಚಂಗಿ ದುರ್ಗಕ್ಕೆ ಹೋಗಿದ್ದಾನೆ ॥ ಪ ॥

ಕಳ್ಳನಾಗಿ ಹೋಗ್ಯಾನೆ ಸುಳ್ಳನಾಗಿ ಹೋಗ್ಯಾನೇ
ಇಲ್ಲಿಗೆ ಅವರೇ ಬರಲೆಂದೇ
ಅರಸಿಕೇರಿಗೆ ಹೋಗುತ್ತಾರೆ
ಅರಸಿಕೇರಿನೇಗೆ ಬಂದಾರೆ ಜವಾನರೇ ॥ ಪ ॥

ಮನಿಯ ಮಾರುಗಳ ಜಪತಿಗೆ
ಮನಿಯೇನೆ ಮಾರುಗಳ ಜಪತಿಯ ಮಾಡ್ಯಾರೇ
ದಂಡ್ಯಾಮ್ಮನ ಗುಡಿಗೆ ನುಗ್ಗುತ್ತಾರೆ
ಹಾಲಿನ ಕೊಡವ ಒಡಿದಾರೆ ॥ ಪ ॥

ತುಪ್ಪದ ಕೊಡವೊಡೆದಾರೆ
ಗುಡಿಯಾಗ ಮ್ಯಾಲ ಹಾಕುತ್ತಾರೆ
ಹೆಣಮಕ್ಕಳ ವಡವೆ ಬಿಚ್ಚುತ್ತಾರೆ
ತಲ ಬಾಗಲವ ಹಾಕುತ್ತಾರೆ ॥ ಪ ॥

ತಲವೇನಾ ಬಾಗಿಲವ ಹಾಕುತ್ತಾರೆ ಜವಾನರೇ
ಉಚ್ಚಂಗಿ ದುರ್ಗಕ್ಕೆ ಹೋಗುತ್ತಾರೆ
ಇತು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇವೆ
ಊರಗಿನ ಸುದ್ದಿ ನೋಡೋ ಬಾರೋ ॥ ಪ ॥

ಮಗನೇನೆ ದಂಡ್ಯಾಣ್ಣ ಬಂದಾನ ಅಂದ್ಹೇಳಿ
ಹೋಳಿಗೆ ಊಟವ ಮಾಡಿಸ್ಯಾಳೆ
ಅಂಡೇವುಕಾ ನೀರಾ ಇಡುತ್ತಾಳೆ
ಗಾಳಿ ಬಚ್ಚಲಿಗೆ ಇಡುದಾಳೆ ॥ ಪ ॥

ಒಂದೇನೇ ಚರಿಗಿ ಮೈಮ್ಯಾಲೆ ಹೊಯ್ಸಕೊಂಡೆ
ಇನ್ನೊಬ್ಬ ಚರಿಗಿ ಇಡಿದಿವ್ವ
ಜೋಡೆರಡು ಅಳು ಕಹಳೆ ಇರುತ್ತಾವೆ
ಇತ್ತ ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇವು ॥ ಪ ॥

ಊರಗಿನ ಸೂರಿನೋಡೋ ಬಾರೋ
ಮನೆಯ ಮಾರುಗಳೇ ಜಪತಿಯೇ
ಎಲ್ಲಾ ಒಡವೆಗಳ ಬಿಚ್ಚಿಸ್ಯಾರೆ
ದಂಡ್ಯಾಮ್ಮನ ಗುಡಿಯ ನುಗ್ಗಿದ್ದಾರೋ ॥ ಪ ॥

ಹಾಲಿನ ಕೊಡವ ಹೊಡಿದಿದ್ದಾರೋ
ತುಪ್ಪದ ಕೊಡವ ಹೊಡೆದಾರೋ
ಮಡಿಯೇನೆ ದಂಡ್ಯಾಣ್ಣ ಹಾಗೇನೆ
ಓಡೋಡಿ ತಾನೇ ದಂಡ್ಯಾಣ್ಣ ಬರುತ್ತಾನೆ ॥ ಪ ॥

ಓಣ್ಯಾಗ ದಂಡ್ಯಾಣ್ಣ ಬರುತ್ತಾನೆ
ಚಿಗವ್ವ ಗೋಳಾಡಿ ಅಳುತ್ತಾಳೆ
ಮನಿಗೇನೆ ದಂಡ್ಯಾಣ್ಣ ಬಂದಾನೆ ಅಂದ್ಹೇಳಿ
ಹೋಳಿಗೆ ಊಟ ಮಾಡಿಸ್ಯಾರೆ ॥ ಪ ॥

ಮಗ ಬಟ್ಟಲ ತುಪ್ಪ ಉಣಲಿಲ್ಲ
ಬೋರಾಡಿ ಚಿಗವ್ವ ಅಳುತ್ತಾಳೆ
ಆರೆಗಾವದ ನೆಲ ಮೂರೆಗಾವದ ಮಾಡಿ
ಅರಸಿಕೇರಿಗೆ ಬರುತ್ತಾನೆ ॥ ಪ ॥

ಕರೆದಲ್ಲಿ ನಾನು ಬರುತ್ತೇನೆ ಜವಾನರೇ
ತಲವ ಬಾಗಿಲ ತೆಗೆರೆಂದೆ ಕೇಳುತ್ತಾನೆ
ತಲವ ಬಾಗಿಲ ತ್ಯಾಗಿಸ್ಯಾನೆ
ಹೆಣ್ಣು ಮಕ್ಕಳ ಒಡವೆ ಕೊಡಿಸ್ಯಾನೆ ॥ ಪ ॥

ಗುಡಿ ಬಾಗಿಲ ತ್ಯಾಗಿ ಹೋವರೆ
ದಂಡ್ಯಾಣ್ಣನ ಶಮನ ಬರುತಾವೆ
ಆರೆಗಾವದ ನೆಲ ಮೂರೆಗಾವದ ಮಾಡಿ
ಹರಪನಹಳ್ಳಿಗೆ ಹೋಗುತ್ತಾನೆ ॥ ಪ ॥

ದಂಡ್ಯಾಣ್ಣನೆಂದೇ ಕರುದಾರೆ
ದಂಡ್ಯಾಣ್ಣನೆಂದೇ ಹೋಗುತ್ತಾನೆ
ಎದ್ದು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇವ
ಮದುವೆಯ ಸುದ್ದಿ ಹೇಳುತ್ತಾನೆ ॥ ಪ ॥

ಹುಡುಗಾಟ ವಾಡುತಾ ಹುಸಿ ನಗೆಯ
ನಗುವುತ ಹೆಣತಿ ವಾಲಿ ಬರುತಾವೆ
ಪತಿರಾಯರ ಕೈಗೆ ಕೊಡುತ್ತಾರೆ
ಒಡನೇ ಪತಿರಾಯ ಹೋಗುತಾನೆ ॥ ಪ ॥

ಇತ್ತ ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನ
ಹೆಣತಿ ವಾಲಿ ಬಂದವೋ ದಂಡ್ಯಾಣ್ಣ
ಹೆಣತಿ ಹೇ ವಾಲಿ ಬಂದಾವೋ ದಂಡ್ಯಾಣ್ಣ
ಸೋಬಾನ ಮಾಡಿಕೊಂಡೇ ಬಾರೋ ಹೋಗೋ ॥ ಪ ॥

ಸೋಬಾನ ಯಾರಿಗೆ ಬೇಕೋಪರಿವು ಯಾರಿಗೆ ಬೇಕೊ
ನನ್ನ ಹೆಜ್ಜೆವು ನನ್ನಂತೆ ನನಗೆ ಗೆಲುವು ತನಕ
ಗಂಗಳಕ್ಕೆ ಇಟ್ಟಿಯೇ ಉಣದಂಗ ಬಂದಯೋ
ಸೋಬಾನ ಮಾಡಿಕೊಂಡೇ ಬಾರೋ ಹೋಗೋ ॥ ಪ ॥

ಆರೆಗಾವದ ನೆಲ ಮೂರೆಗಾವದ ಮಾಡಿ
ಅರಸಿಕೇರಿಗೆ ಬರುತ್ತಾರೆ
ಇತು ಬಾರೇ ಹಡೆದವ್ವ ಮತ್ತೊಂದು ಹೇಳೇನೇ
ಅಲ್ಲಿಗೆ ನಾನು ಹೋಗಲಾರೆ ॥ ಪ ॥

ಬಿಗರ ನಿಲ್ಲಿಗೆ ಕರೆಸವ್ವ
ಬಿಗತಿ ಇಲ್ಲಿಗೆ ಕರೆಸವ್ವ
ಮಡದಿ ನೋಡ್ಯಾಳೆ ಹೋಗುತಾಳೆ
ಫಕ್ಕೀರವ್ವ ಕರಕಂದೆ ಬರುತ್ತಾರೆ ॥ ಪ ॥

ಮೈ ತೊಳೆದು ಮಡಿಯ ಉಡುತ್ತಾರೆ
ಸ್ಯಾವಿಗೆ ಊಟ ಮಾಡುತ್ತಾರೆ
ಚಂದಾಗಿ ವೀಳ್ಯಾವ ಮೆಲುದಾರೆ
ಸಣ್ಣೇನಾ ಮನಯಾಗೇ ಸಣ್ಣ ಮಂಚ ಹಾಕಿ ॥ ಪ ॥

ಸಣ್ಣ ಮಲ್ಲಿಗೆಯ ಅರಿವ್ಯಾರೆ
ದೊಡ್ಡೇನಾ ಮನಿಯಾಗೇ ದೊಡ್ಡ ಮಂಚ ಹಾಕಿ
ದೊಡ್ಡ ಮಲ್ಲಿಗೆ ಅರುವ್ಯರೆ
ಗಾಜಿನ ಗಂಭಳಕೆ ನಿಲುತಾಳೆ

ಹುಡುಗಾಟ ಮಾಡುತಾನೆ ಸೆಪುಡಿ ಸೇದುತಾ
ಬಿಗತಿ ಕೈಹಿಡಿದೇ ಎಳೆವುತ್ತಾ
ಬಿಗತಿ ಕೈ ಇಡಿದೇ ಎಳೆವುತ ದಂಡ್ಯಾಣ್ಣ
ದಂಡ್ಯಾಣ್ಣನ ಶಮನ ಬರುತಾವೇ ‖ ಪ ‖

ದಂಡ್ಯಾಣ್ಣನೆಂದೇ ಕರುದಾರೆ
ಒಂದೇ ಸಾರಿಯ ಕರುದಾರೆ
ಒಂದೇ ಸಾರಿಗೆ ಹೋಗಲಿಲ್ಲ
ಎಂಡ್ನೆ ಸಾರಿಗೆ ಕರುದಾರೆ ‖ ಪ ‖

ಎಂಡ್ನೆ ಸಾರಿಗೆ ಹೋಗಲಿಲ್ಲ
ಮೂರೆ ಸಾರಿಗೆ ಕರುದಾರೆ
ಬಂದವೆಂದ್ಹೇಳಿ ಹೋಗುತ್ತಾನೆ
ಇತು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇವು ‖ ಪ ‖

ಹೊಸಪ್ಯಾಟಿಗೆ ಕೇಸು ಹಾಕಿದ್ದಾರೆ
ಹೊಸಪ್ಯಾಟಿಗೆ ನೀನು ಬರಬೇಕು
ಇತು ಬರ್ರಿ ಜವಾನರೇ ಮತ್ತೊಂದು ಹೇಳೇನ
ಬರುತ್ತೇನೆ ಮುಂದಕ್ಕೆ ನೆಡಿರೆಂದೋ ‖ ಪ ‖

ಹೊಸಪ್ಯಾಟಿಗೆ ಜವಾನರು ಹೋಗುತ್ತಾರೆ
ಇತು ಬಾರೆ ನನ ಮಡದಿ ಮತ್ತೊಂದು ಹೇಳೇನ
ಯಾರಿಗೆ ಮಡದಿ ಆಗಿ ಇರುತ್ತೇ
ಯಾರ ತೋಳಿಗೆ ಒರಗಿಯೇ ‖ ಪ ‖

ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೆ
ಹಡದವ್ವನ ಮನಗೆ ಹೋಗುತಾನೆ
ಇತು ಬಾರೇ ಹಡದವ್ವ ಮತ್ತೊಂದು ಹೇಳೇನ
ಹೆಣತಿ ಊರಿಗೆ ಕಳುವ ಬ್ಯಾಡೆ ‖ ಪ ‖

ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೆ ನೋಡೆಯವ್ವ
ಹಡೆದವ್ನ ಗುಡಿಗೆ ನಡೆದಾನೆ ಮಂದಗಾಮಿನ
ಹೂವಿನ ಪುಟ್ಟಿ ಬಲಗೈಲೆ ಮಂದಗಾಮನ
ಹೊಸಬಾವಿ ತೋಟಕೆ ನಡೆದಾನೆ ಮಂದಗಾಮನ ॥ ಪ ॥

ನೂರೋಂದು ಹೂವ ಎತ್ತುತ್ತಾನೆ ಮಂದಗಾಮನ
ನೂರೊಂದು ಪತ್ರಿ ಎತ್ತುತ್ತಾನೆ ಮಂದಗಾಮನ
ಹಡೆದವ್ನ ಗುಡಿಗೆ ಬರುತ್ತಾನೆ ಮಂದಗಾಮನ
ನೂರೊಂದು ಸೀರೆ ಉಡಿಸ್ಯಾನೆ ಮಂದಗಾಮನ ॥ ಪ ॥

ನೂರೊಂದು ಹೂವು ಮುಡಿಸ್ಯಾನೆ ಮಂದಗಾಮನ
ನೂರೊಂದು ಪತ್ರಿ ಮೂಡಿಸ್ಯಾನೆ ಮಂದಗಾಮನ
ನೂರೊಂದು ಪೂಜೆ ಇಳಿವ್ಯಾನೆ ಮಂದಗಾಮನ
ಒಲ್ಲಿ ಸೆರಗಿಟ್ಟು ಅಳುತ್ತಾನೆ ಮಂದಗಾಮನ ॥ ಪ ॥

ಅಳುಬ್ಯಾಡೋ ನನ ಮಗನೇ ಕರಿಬ್ಯಾಡೋ ನನಮಗನೇ ನೋಡೆಯವ್ವ
ಯಾಕ ಅಳುತಿ ನನ್ನ ಹಸು ಮಗನೇ ಮಂದಗಾಮನಿ
ನಿನ್ನ ಹಿಂದೆ ನಾನು ಬರುತ್ತಾನೆ ಮಂದಗಾಮನಿ
ಅಳುಬ್ಯಾಡೋ ನನ್ನ ಹಸು ಮಗನೇ ಮಂದಗಾಮನಿ ॥ ಪ ॥

ಮಂದಿಮಾನವರೇನೇ ಬಂದಾರೆಂದ್ಹೇಳೇನೆ ನೋಡೆಯವ್ವ
ನೀ ಬರುವ ಗುರುತ ನನಗ್ಹೇಳೆ ಮಂದಗಾಮನಿ
ನಾನೇನೆ ಬರುವಾಗೇ ಉದನಕಡ್ಡಿ ಏ ನಾತ ನೋಡೆಯವ್ವ
ಚೆಂದಿರ ದಿಕ್ಕೆಟ್ಟನಾರು ತಾವೆ ಮಂದಗಾಮನಿ ॥ ಪ ॥

ಜೋಡೆರಡು ಕವಡೆ ನುಡುದಾವೋ ಮಂದಗಾಮನಿ
ಹಡದವ್ವ ಬಂದಾಳೋ ಅನ್ನು ಮಂದಗಾಮನಿ
ಗುಡಿಯ ಬಾಗಲ ತೆಗಿಸ್ಯಾನೆ ಮಂದಗಾಮನಿ
ಇತು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇವೆ ನೋಡೆಯವ್ವ ॥ ಪ ॥

ಊರಗಿನ ಬಂಡಿಯ ಕಟ್ಟು ಹೋಗು ಮಂದಗಾಮನಿ
ಊರಗೀನಾ ಹೇ ಬಂಡಿ ಕವಾಲಿನೇ ಹೇ ಬಂಡಿ ನೋಡೆಯವ್ವ
ಹಡದವ್ನ ಬಂಡಿ ಕಟ್ಟುತ್ತೇನೆ ಮಂದಗಾಮನಿ
ಅಗಸರ ಬಂಡಿ ಕಟ್ಟೋ ಹೋಗೋ ಮಂದಾಗಾಮನಿ ॥ ಪ ॥

ಅಗಸರ ಹೇ ಬಂಡೇಕಟ್ಟೋಗು ಅಂದರೇ ನೋಡೆಯವ್ವ
ಹಡದವ್ನ ಗುಡಿಯ ತ್ಯಾಗಿರೆಂದೋ ಮಂದಗಾಮನಿ
ಹಡದವ್ನ ಗುಡಿಯ ತ್ಯಾಗಿಸ್ಯಾನೋ ಮಂದಗಾಮನಿ ॥ ಪ ॥

ಗೌಡರ ಮನಿಯ್ಯಾಗೆ ಹೋಳಗೆ
ಮಾಡಿದ್ರು ಈಗೂ ಉಂಡು ಬಂದೇ
ಊಟಕ ದಂಡ್ಯಾಣ್ಣ ಹೋಗಲಿಲ್ಲ
ಮುಂದಾ ಎ ಬಂಡಿ ಬಿಡುತ್ತಾನೆ ॥ ಪ ॥

ನೇಸೆಪುಡಿ ಅವರು ತಿನಸ್ಯಾರೆ
ನಕಲಿ ಮಾಡಿ ಅವರು ಅಣುಕಿಸ್ಯಾರೆ
ನೆಸೆಪುಡಿಯೇ ತಿನಸ್ಯಾರೇ ತುಸು
ಮನದ ಹೊಟ್ಯಾಗೆ ಉರಿಯು ಬೀಳುತಾವೆ ॥ ಪ ॥

ಹೊಟ್ಯಾಗ ಎ ಉರಿಯೇ ಬಿದ್ದಾವೆ ದಂಡ್ಯಾಣ್ಣಗ
ಕೊಡಗೊಳ್ಳಿ ದಂಡ್ಯಾಣ್ಣ ಉಡುತಾನೆ
ವಾರಿಗೆ ದಂಡ್ಯಾಣ್ಣ ಹೋಗುತ್ತಾನೆ
ಎಂಡ್ಕು ಬಾಗಸೇ ನೀರ ಕುಡುದಾನೆ ॥ ಪ ॥

ಕಲಸಿವ ಬಾವ್ಯಾಕೆ ಬಿಳುತ್ತಾನೆ
ಬಾವ್ಯಾಕ ದಂಡ್ಯಾಣ್ಣ ಬಿಳುತ್ತಾನೆ
ಹೊಸಪ್ಯಾಟಿ ಹೆಣಮಗಳು ನೀರಿಗೆ ಬಂದರೆ
ದಂಡ್ಯಾಣ್ಣನವರೇ ನೋಡುತ್ತಾರೆ ॥ ಪ ॥

ಓಡೋಡಿ ಅವರೇ ಹೋಗುತ್ತಾರೆ
ದಂಡ್ಯಾಣ್ಣನ ಮುಂದೆ ಹೇಳುತ್ತಾರೆ

ಮೂರನೇ ಯಾಜಿ ಮೂರ ತಿಂಗಳು ಹೆಣುಮಮ್ಮ
ಬಾವಿಯ ಬಿದ್ದು ಸತ್ತುದ್ದಾನೋ ॥ ಪ ॥

ಓಡೋಡಿ ದಂಡ್ಯಾಣ್ಣ ಬರುತ್ತಾನೆ
ಹಡೆದ ಮಗನನ್ನ ಸಲಲಿಲ್ಲೆ
ಬಾವಿಗೆ ಬಿದ್ದೆ ಸತ್ತಿಯಲ್ಲೋ
ತೋಗರೇವನ ತೂಗಿರೆ ದಂಡ್ಯಾಣ್ಣನ ॥ ಪ ॥

ಸ್ವಾಮದ ದಂಡ್ಯಾಣ್ಣನ ಬಾವಿಗೆ ಇರುವಂತ
ದಂಡ್ಯಾಣ್ಣನ ಸ್ರಾಮವನ್ನ
ಬೋರಾಡಿ ದಂಡ್ಯಾಣ್ಣ ಅಳುತ್ತಾನೆ
ಸಣ್ಣ ಬಂಡಿಯನ ದಂಡ್ಯಾಣ್ಣನ ॥ ಪ ॥

ಇರುವಂತ ದಂಡ್ಯಾಮ್ಮನಗೆ ಗುರು ಆಗುತ್ತಾಳೆ
ದಂಡ್ಯಾಮ್ಮಗೆ ಹರವಿ ಹಾಗ್ಯಾಳೆ ಹಾಕ್ಕಿನ್ನು
ಜೇಡನ ಭಲೆ ಬಿಸಿ ಬರುತಾಳೆ
ಜೇಡರ ಭಲೆ ಬಿಸಿ ಬರುತಾಳೆ ॥ ಪ ॥

ಜೇಡರ ಭಲೆ ಬಿಸಿ ಬಂದಾಳೆ ದಂಡ್ಯಾಮ್ಮ
ಸತ್ತ ದಂಡ್ಯಾನ್ನನ ತೊಡೆ ಮ್ಯಾಲೆ ಹಾಕೊಂಡೆ
ಹೇಳಿದ ಮಾತು ಕೇಳಲಿಲ್ಲ
ಮಾವನವರೇ ಮೋಸ ಮಾಡಿದ್ದಾರೋ ॥ ಪ ॥

ಉಡಿಯೊಳ ಬಂಡಾರ ಉಗ್ಗುತ್ತಾಳೊ
ಎದೆ ಮ್ಯಾಲಿನ ನೀರು ತ್ಯಾಗುದಾಳೋ
ಎದ್ದು ದಂಡ್ಯಾಣ್ಣ ಕುಳ್ಳುತ್ತಾನೆ
ದಂಡ್ಯಾಣ್ಣ ಜನುಮ ಪಡೆದುದಾಳೆ ॥ ಪ ॥

ಇತು ಬಾರೋ ನನ್ನ ಮಗನೇ ಮತ್ತೊಂದು ಹೇಳೆವು
ಊರಿಗೆ ನೀನೇ ಹೋಗಬೇಕು
ಬಂಡಿಯ ಮ್ಯಾಲೆ ಕುಳೀತಾಳೆ
ಬಂಡಿಯ ದಂಡ್ಯಾಣ್ಣ ಬಿಡುತ್ತಾನೆ ॥ ಪ ॥

ತೂಗಿರೇ ತೂಗಿರೇ ದಂಡ್ಯಾಣ್ಣನ
ಶ್ರಮದ ದಂಡ್ಯಾಮ್ಮನ ತೂಗಿರೇ
ಇತು ಬಾರೋ ನನ ಮಗನೇ ಮತ್ತೊಂದು
ಹೇಳೇನು ಊರಿಗೆ ನಾವೇ ಹೋಗಬೇಕೋ ॥ ಪ ॥

ಆರೇ ಗಾವದ ನೆಲ ಮೂರೇ ಗಾವದ ಮಾಡಿ
ಅರಸಿಕೇರೆಗೆ ಹೋಗುತ್ತಾರೆ
ಅರಸಿಕೇರಿಗೆ ಬರುತ್ತಾರೆ
ಗಾಳೇನೆ ಬೀಸುತಿದೆ ಮರನಾವಾಲಾಡುತಿದೆ. ॥ ಪ ॥

ಗುಡಿ ಮುಂದಾಕ ಬಂಡಿ ತರುಬ್ಯಾನೆ
ಕಲ್ಲಪ್ಪನ ಗುಡಿಗೆ ಹೋಗುತ್ತಾರೆ
ಉತ್ತತ್ತಿ ಸೂರಿ ತಿನ್ನುತ್ತಾರೆ
ಗುಡಿ ಮುಂದಾಕೆ ಬಂಡಿ ತರುಬ್ಯಾನೆ ॥ ಪ ॥
ಬಂಡಿಯ ಕೊಳ್ಳ ಅರುದಾನೆ
ಮಳಿಗ್ಯಾಕೆ ಎತ್ತ ಕಟ್ಟುತ್ತಾನೆ
ಕಣದಾಗ ಬಂಡಿ ಬಿಡಿಸ್ಯಾನೆ
ಎಲ್ಲಿಗೆ ಹರ ಹರ ಎಲ್ಲಿಗೆ ಶಿವ ಶಿವ ॥ ಪ ॥

ಎಲ್ಲಿಗೆ ತಂದೆ ಪದ ಮುಂದೆ
ಇತು ಬಾರೋ ನನ ಮಗನೇ
ಮತ್ತೊಂದು ಹೇಳೇನೂ
ಮಾವನವರೇ ಮೋಸ ಮಾಡುತ್ತಾರೆ ॥ ಪ ॥

ಗುಡಿಯ ಬಾಗಲ ಮುಟ್ಟಬ್ಯಾಡೋ
ಯಾರ ಕರದಾರೆ ಹೋಗಬ್ಯಾಡೋ
ಗುಡಿ ಬಿಟ್ಟು ನೀನು ಬರಬ್ಯಾಡೋ
ಇತು ಬಾರೋ ನನ ಮಗನೇ ಮತ್ತೊಂದು ಹೇಳೇನು ॥ ಪ ॥

ಮೂರ ತಿಂಗಳಿಗೆ ಬರುತ್ತೇನೋ
ಚನ್ನಪಟ್ಟಣಕ್ಕೆ ಹೋಗುತ್ತೇನೋ

ಬುದ್ದಿ ವಾದಗಳ ಹೇಳೇಳಿ ಗ್ಯಾನಗಳ ಹೇಳೇಳಿ
ಮಾಯವಾದಳೇ ಮಳಲಾಗೇ ॥ ಪ ॥

ತುಸು ಮಳ ಮಸಲತ್ತು ಮಾಡುತ್ತಾರೆ
ಗಳಿಗೇರಿ ದುರುಗ್ಯೆವ್ವನ ಮುಡಿಯೆಂದೆ
ತುಸು ಮನವೇ ಉಡಿಯ ಕಾಚುಗಳ ಬಿಡುತಾರೆ
ಊರೆಂಬೋ ಊರೆ ಹೋಗುತಾರೆ ॥ ಪ ॥

ದಂಡ್ಯಾಣ್ಣನವರೇ ಕರೆದಾರೆ
ದಂಡ್ಯಾಣ್ಣರೆಂದು ಹೋಗಲಿಲ್ಲ
ಊರೆಂಬೊ ಹೇ ಊರೆ ನೋಡಾಕೆ ಬಂದಾರೆ
ದಂಡ್ಯಾಣ್ಣ ಏಕೆ ಬರಲಿಲ್ಲ ॥ ಪ ॥

ನಾಲ್ವರೇ ಇವ್ನೆ ಹೋಗುತಾರೆ
ಬೇಸ್ತಾರದೊತ್ತಿಗೆ ಶುಕ್ರವಾರ ಹ್ಯಾಳ್ಯಾವಕೆ
ದಂಡ್ಯಣ್ಣನ ಜನುಮ ಹೋಗುತಾವೆ
ಅಕ್ಕ ತಂಗಿಯರದೇ ಶಿವ ಗೋಳೆ ॥ ಪ ॥

ಅವರ ತಾಯಿ ಮಕ್ಕಳದೇ ಶಿವಗೋಳೆ
ಹೊಸಪ್ಯಾಟಿ ಊರ ಮುಂದೆ ಹೆಜ್ಜೆವು ನೋಡ್ಯಾರೆ
ದಂಡಿನ ದಂಡ್ಯಾಮ್ಮನ ಮರುತ್ತಾರೆ
ದೊಡ್ಡೋಳು ದಂಡ್ಯಾಮ್ಮನ ಮರುತ್ತಾನೆ ದಂಡ್ಯಾಣ್ಣ ॥ ಪ ॥

ಹೆಜ್ಜೆವಾನಾಡಿ ಮಡುದಾನೆ
ಅರಸಿಕೇರಿ ಮುಂದೆ ನ್ಯಾಯವಾದನ ಕ್ಯಾರೆ
ಆಕಿ ದಂಡ್ಯಾಮ್ಮನ ಮಗತಾನೆ
ಆರೇನಾ ದಂಡ್ಯಾಮ್ಮನ ಮಗ ತಾನೇ ದಂಡ್ಯಾಣ್ಣ ॥ ಪ ॥

ತಾಯವ್ವ ನೊಡೆ ಮಡುದಾನೆ
ಯಾವೂರಿಗೆ ಆಳು ಬಿಡು ತಂದೆ
ಅಣ್ಣ ತಮ್ಮಂದಿಗಾಳು ಬಿಡುತಾರೆ
ಬಳಗಕೆ ಹಾಳು ಬಿಡುತಾರೆ ॥ ಪ ॥

ಅಣ್ಣ ತಮ್ಮರಿನ್ನು ಬರುತ್ತಾರೆ
ಹಡಗಲಿಗೂ ಆಳು ಹೋಗುತಾರೆ
ಹಡಗಲಿ ಅವರೇ ಬರುತ್ತಾರೆ
ಆರೇಗಾವದ ನೆಲ ಮೂರೇ ಗಾವದ ಮಾಡಿ ॥ ಪ ॥

ಯಾಲಕ್ಕಿಗರವೂ ಗಜ ನಂಬೆತಾಯಿ
ಪಕ್ಕೀರವ್ವ ಬರುತ್ತಾಳೆ
ಉತ್ತುತ್ತಿ ಎ ಮರ ಉತ್ತತ್ತಿ ಎ ಮರ
ಉತ್ತತ್ತಿ ಎ ಗಳವು ಗಜನಂಬೆ ಮರದೊಡೆಯ ॥ ಪ ॥
ನತ್ತಿ ಪಕ್ಕಿರವ್ವ ಬರುತ್ತಾಳೆ
ಬಳಗವು ಇನ್ನು ಬರುತ್ತಾವೆ
ಅಣ್ಣ ತಮ್ಮರಿನ್ನು ಬರುತಾವೆ
ಜನರು ಇನ್ನು ಬರುತಾರೆ ॥ ಪ ॥

ಗಂಡಿನ ಸಿಂಗಾರ ಮಾಡುತ್ತಾರೆ
ನೂರೋಂದು ಹೂವ ಮೂಡಿಸ್ಯಾರೆ
ನೂರೋಂದು ಪೂಜೆ ಮಾಡಿಸ್ಯಾರೆ
ಭಾವ– ಮೈದುನರ ಕರುದಾರೆ ॥ ಪ ॥

ಬಾಯಿನಾ ತೆಗುದೇ ಇಡುತ್ತಾರೆ
ಹತ್ತೇನು ವರುಷದ ಚಿಕ್ಕ ಪ್ರಾಯದ
ದಂಡ್ಯಾಣ್ಣನ ಹೆಗಲಿಗೆ
ಗಡ್ಡಿಮನಿ ದಂಡ್ಯಾಣ್ಣನ ಅಮುಚ್ಚಾರೆ ॥ ಪ ॥

ನಾಲರ ಕರಕಂಡೆ ಬರುತಾರೆ
ಕರಿಮಠದ ಐನೂರ ನಾ ಕರಕಂಡೆ ಬಸಣ್ಣ
ಕಂಬಳಿಗೆ ಮಾಟ ಮಾಡಿಸ್ಯಾರೆ
ನಾಲರು ಕರಕಂಡೆ ಹೋದಾರೆ ದಂಡ್ಯಾಣ್ಣನ ॥ ಪ ॥

ಕಂಬಳಿಯ ಮ್ಯಾಲೆ ಕುಂದ್ರಿಸ್ಸಾರೇ
ಕೈಯಾಕ ನಿಂಬಿಹಣ್ಣ ಕೊಡುತ್ತಾರೆ

ನೋಡುತಾ ನೋಡುತಾ ಕೈಕಾಲನಾ ನೋಡುತಾ
ಎಡಗಾಲಿನ ಬಟ್ಟ ತುಳಿದಾರೆ ॥ ಪ ॥

ಹೊಟ್ಯಾಗ ಉರಿಯ ಬಿಳುತಾವೆ
ಹೊಟ್ಯಾ ಎ ಉರಿಯ ಬಿದ್ದಾವೆ ದೊಡ್ಡಣ್ಣಗೆ
ಬುಡು ಬುಡು ದಂಡ್ಯಾಣ್ಣ ಉಳ್ಳಾಡುತ್ತಾನ
ಅಷ್ಟೆನಾ ಹೇ ವೇಳೆಗೆ ಹಿಟ್ಟಿ ನೀರಾ ಬೆರಸ್ಯಾರೆ ॥ ಪ ॥

ದಂಡ್ಯಾಣ್ಣನವರೇ ಕುಡಿಸ್ಯಾರೇ
ಬುಡು ಬುಡು ದಂಡ್ಯಾಣ್ಣ ಉಳ್ಳಾಡುತ್ತಾನೆ
ನಾಲ್ವರೇ ಒತ್ತೆ ತರುತಾರೆ
ಗುಡಿಯಾಗ ದಂಡ್ಯಾಣ್ಣ ಮಲಗುಸುತ್ತಾರೆ ॥ ಪ ॥

ಗುಡಿಯಾಗ ದಂಡ್ಯಾಣ್ಣನ ಮಲಗುಸುತ್ತಾರೆ
ಗುಡಿಯಾಗೇ ದಂಡ್ಯಾಣ್ಣನ ಹಾಕುತ್ತಾರೆ
ಗುಡಿಯಾಗೇ ದಂಡ್ಯಾಣ್ಣನ ಹಾಕುತ್ತಾರೆ
ಅವರು ಮನೆಗಿನ್ನು ಹೋಗುತ್ತಾರೆ ॥ ಪ ॥

ಅವರ ಅಕ್ಕ ತಂಗಿಯರದೇ ಶಿವಗೋಳ
ಅವರ ತಾಯಿ ಮಕ್ಕಳದೇ ಶಿವಗೋಳ
ನಿಚ್ಚನಹಳ್ಳಿ ಗೌಡರಿಗೆ ತಿಳಿಸುತ್ತಾರೆ
ಆರೆಗಾವದ ನೆಲ ಮೂರೆಗಾವದ ಮಾಡಿ ॥ ಪ ॥

ಗೌಡರ ಮನಿಗೆ ಬರುತ್ತಾರೆ
ಇತು ಬಾರೇ ಗೌಡರೇ ಮತ್ತೊಂದು ಹೇಳೇವು
ದಂಡ್ಯಾಣ್ಣ ಇನ್ನು ಬದುಕಗಿಲ್ಲೋ
ಬತ್ತಲ ಎ ಗುದರಿ ಹೇರಿ ನಾ ಹನುಮನಗೌಡ ॥ ಪ ॥

ಅರಸಿಕೆರಿಗೆ ಹೋಗುತ್ತಾನೆ
ತರಬಿ ದಂಡ್ಯಾಣ್ಣನ ನೋಡುತ್ತಾನೆ.
ಹರಿವಿನ ಮುಡುದಕ ಹತ್ತೆ ಎಕರೆ ಕೊಡುತೆನೋ
ಹರಿವಿನ ಮೂಲಕ ಹರಿಲಿಲ್ಲೋ ॥ ಪ ॥

ದಂಡ್ಯಾಣ್ಣನ ಎ ಕಾಯಿಲೆ ಕಟ್ಟೇನಿ
ಇಳಿವುರೇಕೆ ಆರು ಎಕರೆ ಭೂಮಿ ಕೊಡುತ್ತೇನೋ
ಹರಿವಿನ ಮೂರು ಲೋಕ ಹರಿಲಿಲ್ಲೊ
ಹನ್ನೆರಡು ವರುಷದ ಚಿಕ್ಕ ಪ್ರಾಯದ ॥ ಪ ॥

ಮಕ್ಕಳಿಗೆ ಎಕ್ಕ ದಂಡ್ಯಾಣ್ಣ ಹೆಗಲಿಗೆ
ಹತ್ತವೆ ನಾಲ್ಕೇಲಿಜತವೇ ಹಾಕುತ್ತ
ಹಿರಿಯ ಕರಿಕೆ ನೆಡುತಾರೆ
ಹನ್ನೆರಡು ವರ್ಷದ ಕನಿ ಪ್ರಾಯದ ॥ ಪ ॥

ಹುಡಗರೇ ಬಣ್ಣದ ಗುಡಿ ತ್ಯಾಗುವಾರೆ
ಮತ್ತೇಳು ವರ್ಷದ ಚಿಕ್ಕ ಪ್ರಾಯದ
ಹುಡುಗರೇ ಮುತ್ತಿನ ಗುಡಿತಾಗುದಾರೇ
ಇತುಬಾರೇ ಪಕ್ಕೀರವ್ವ ಮತ್ತೊಂದು ಹೇಳೇವೆ. ॥ ಪ ॥

ಮುತ್ತಿನ ಮುಗುತಿ ತೆಗಿಸ್ಯಾರೆ
ಮುತ್ತಿನ ಮುಗುತಿ ಎ ತೆಗಿದ್ಯಾಳ
ಗಾಜಿನ ಬಳಿಯ ವಡುದಾರೆ
ಗಾಜಿನ ಬಳಿಯ ಹೊಡುದಾಳೆ ॥ ಪ ॥

ಮಂಗಳ ಸೂತ್ರವ ಅರುದಾರೆ
ಮಂಗಳ ಸೂತ್ರವ ಅರುದಾಳೆ
ಅವರ ಅಕ್ಕ ತಂಗಿಯರದೇ ಶಿವಗೋಳೆ
ಅವರ ತಾಯಿ ಮಕ್ಕಳದೇ ಶಿವಗೋಳ ॥ ಪ ॥

ಹತ್ತನೇ ವರುಷದೆ ಚಿಕ್ಕ ಪ್ರಾಯದ
ಹುಡುಗರೇ ಬೆಟ್ಟದ ಬೆಲುವನ್ನು ಕುಡಿದಾರೆ
ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೆ
ವಡ್ಡರ ದಂಡ್ಯಾಣ್ಣನ ಮನಗ್ಹೋದ ॥ ಪ ॥

ಯಾವುದೂರೆಂದೆ ಕೆಳುತಾರೆ
ಅರಸಿಕೇರಿರೆಂದೆ ಹೇಳುತ್ತಾನೆ
ಯಾತಕ ನೀವು ಬಂದಿದ್ದಿರಾ
ದಂಡ್ಯಾಣ್ಣನ ಹೇ ಮಗ ಹೆಜ್ಜೆವುಕ ॥ ಪ ॥

ಬಂದಿದ್ದ ವರುಷಕ್ಕ ವ್ರತವೇ ತೇಗುದಾರೆ
ವಾರ ತುಂಬಾ ದಾರಿ ಹಾಕಿದ್ದೆವು
ಹಡೆದವ್ವ ಹೇಳಿ ಕಡಿವ್ಯಾಲೋ
ಇತು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನ ॥ ಪ ॥

ಬಂಡಿಯ ಕೊಳ್ಳ ಅರಿ ಬಾರೋ
ಬಂಡಿಯ ಕೊಳ್ಳ ಅರಿವಾನೇ
ಮಳಿಗ್ಯಾಕೆ ಎತ್ತು ಕಟ್ಟಿಸ್ಯಾನೆ ದಂಡ್ಯಾಣ್ಣ
ಹಡೆದ ಮಗನೆಂದು ಸಲುವ್ಯಾನೆ ॥ ಪ ॥

ಎಲ್ಲಿಗೆ ಹರ ಹರ ಎಲ್ಲಿಗೆ ಶಿವ ಶಿವ
ಎಲ್ಲಿಗೆ ತಂದೆ ಪದ ಮುಂದೆ
ಎಲ್ಲಿಗೆ ಎ ತಂದೆ ಪದ ಮುಂದೆ ಹಡದೊಡೆಯ
ಮ್ಯಯಾಳೂಡೂಳ ವ್ರತವ ಬೆಳೆಸವ್ವ ॥ ಪ ॥

ಮ್ಯಯಾಳು ಡೂಳ ವ್ರತವ ಬೆಳೆಸವ್ವ
ಒಂದು ತಿಂಗಳ ಬಿಟ್ಟು ಎಂಡ್ಯ ತಿಂಗಳ ಬಿಟ್ಟು
ಮೂರ ತಿಂಗಳ ಬರುತಾಳೆ
ಇತು ಬಾರೋ ನನ ಮಗನೇ ಮತ್ತೊಂದು ಹೇಳೇನೇ ॥ ಪ ॥

ಮೂರ ತಿಂಗಳ ಸುದ್ದಿ ಇಲ್ಲಿಸವು
ಮೂರ ತಿಂಗಳ ಪೂಜೆ ಇಲ್ಲವಪ್ಪ
ನನ್ನವು ಜಗಳ ಇಲ್ಲವಪ್ಪ
ನನ್ನ ಪೂಜೆಗಳ ಇಡುವಪ್ಪ ॥ ಪ ॥

ಬೆಳೊಂದು ಮಾಡ್ಯಾನೆ ಬೆಳದಿಂಗಳು ಹರಿದಾವೆ
ದಂಡ್ಯಾಣ್ಣ ನಿನ್ನ ಕರುದಾನೆ
ಇತು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನು
ಹಡದವ್ವ ಸಾಪುನಕೆ ಬಂದಾಳೇನು ॥ ಪ ॥

ಹಡದವ್ವ ಸಾಪುನಕ್ಕಿನ್ನು ಬಂದಾವಳೆ
ಪೂಜೆಗಳನ್ನು ಇನ್ನೂ ಇಳುವಪ್ಪ
ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೆ
ಅಂಗಡಿಗೆ ಇನ್ನು ಹೋಗುತಾನೆ ॥ ಪ ॥

ಪೂಜೆ ಸಾಮಾನು ಕೊಳ್ಳುತ್ತಾರೆ
ನೂರೊಂದು ಹೂವ ತರುತಾರೆ
ಸಕಲ ಕಾರ್ಯವ ಕೊಳ್ಳುತಾರೆ
ಹಣ್ಣು ಕಾಯಿಲೆಗಳ ಕೊಳ್ಳುತಾರೆ ॥ ಪ ॥

ಎಲ್ಲವನ್ನು ಅವರೆ ಕೊಂಡಾರೆ ದಂಡ್ಯಾಣ್ಣ
ಅವರ ಮನೆಗೆ ಅವರೆ ಬರುತ್ತಾರೆ
ಮನೆಯ ಮಾರುಗಳ ಬಳುದಾರೆ
ಮನಯ ಮಾರುಗಳ ಬಳಿಸ್ಯಾರೆ ॥ ಪ ॥

ಹುಗ್ಗಿ ಹೋಳಿಗೆಯ ಮಾಡಿಸ್ಯಾರೆ
ಅವರಮನೆಯ ಮಾರುಗಳನ್ನು ಬಳಿಸುವರು ಮನಮಾರು
ಗಳು ಬಳಿದಾರೆ ಹುಗ್ಗಿ ಹೋಳಿಗೆ ಮಾಡುವರು
ಕರಿಯೇನಾ ಕಂಬಳಿ ಮುರಿದು ಗದ್ದಿಗೆ ಮಾಡಿ ॥ ಪ ॥

ತುಪ್ಪದ ಎಡೆಯ ಹಾಕುತ್ತಾರೆ
ಹಡದವ್ವ ಎಡೆಯ ಹಾಕುತ್ತಾರೆ
ನೂರೊಂದು ಹೂವ ಮುಡಿಸ್ಯಾರೇ
ನೂರೊಂದು ಪೂಜೆ ಇಳಿವ್ಯಾರೆ ॥ ಪ ॥

ಇತು ಬಾರೋ ನನ ಮಗನೇ ಮತ್ತೊಂದು ಹೇಳೆನೂ
ಕೂರುಟದ ಬಾಗಲು ತೆಗೆದವೋ
ಅಂದಾಳೆ ಹಾಡ್ಯಾಡಿ ಮಗನಿಗೆ ಹೇಳೇಳ
ಮಯವಾದಳೇ ಮಳಲಾಗಿ ॥ ಪ ॥

ಏಡಿಯಗಳ ಅವರೇ ತೆಗುದಾರೆ
ಊಟಗಳ ಅವರೇ ಮಾಡುತಾರೆ
ಬೆಳ್ಳೊಂದು ಮುಡ್ಯಾವೆ ಬೆಳಗೊಂದೇ ಅರಿದಾವೆ
ಕೂರುಟ ದಂಡ್ಯಾಣ್ಣ ಹೋಗುತ್ತಾನೆ ॥ ಪ ॥

ಕೊರುಟಕ ಬಾಗಲು ಹತ್ತುತ್ತಾನೆ
ದಂಡ್ಯಾಣ್ಣನ ಕರುದಾರೆ
ತಂದ್ಯಾನ ದಂಡ್ಯಾಣ್ಣ ಕಛೇರಿಕೆ ಹತ್ತುವಾಗ
ಜೋಡೆರಡು ಕವಡೆ ನುಡಿದಾವೆ ॥ ಪ ॥

ಹಡೆದವ್ವ ಬಂದಾಳ ಅನುತಾನೆ
ತಂದೇನೆ ದಂಢ್ಯಾಣ್ಣ ಕೂರುಟ ಹತ್ತುವಾಗೆ
ಚೆಂದಿರ ದಿಕ್ಕೆಟ್ಟ ನಾರುತಾವೆ
ತಾಯವ್ವ ಬಂದಾಳ ಅನ್ನುತಾನೆ ॥ ಪ ॥

ತುಸು ಮಾನ ವರವರೆ ಬರುತಾರೆ
ಬಸವಣ್ಣನವರೇ ಕಳುವ್ಯಾರು
ಎನ್ನೊಂದು ದೊರೆರಾಯ ಕೇಳುತಾರೆ
ನಮ್ಮವ್ವನ ಊರನಿಂದ್ರ ನಮ್ಮವ್ವ ಬಿಟ್ಟದ್ರ ॥ ಪ ॥

ನಮ್ಮವ್ವ ತವರಿಗೆ ಹೋಗ್ಯಾಳೊ ದೊರೆರಾಯ
ನಮಗೆ ಪಾಲುಗಳು ಮಾದಲಿಲ್ಲೊ
ನಮಗೇನೆ ಪಾಲುಗಳು ಮೊದಲಿಲ್ಲ ಅಂದ್ವೇಳಿ
ದಂಡ್ಯಾಣ್ಣ ಕುಂದ್ಯಾನೆ ನುಡಿಯಾನೋ ॥ ಪ ॥

ಹಡದವ್ವಗ ಸೀಟಿಲ್ಲ ಹಡದವ್ವ ಸೀಟಿಲ್ಲ
ಹಡದವ್ವತವರಿಗೆ ಹೋಗಿದ್ದಳೊ
ದಂಡ್ಯಾಣ್ಣನವರೇ ಕರುದಾರೆ
ದಂಡ್ಯಾಣ್ಣ ಸವಾಲಿಗೆ ಬರುತಾರೆ ॥ ಪ ॥

ತಂದೇನೇ ದಂಡ್ಯಾಣ್ಣ ಸವಾಲಿಗೆ ಬಾಯಿ
ಬಿಡುವಾಗ ಬಾವಲಿ ಬಾಯಿ ಬಿಡುತಾವೆ
ಅವರು ತವರೀಗೆ ಹೋಗಿದ್ದಾಳೋ ದೊರೆರಾಯ
ಮೂರು ತಿಂಗಳಿಗೆ ತಾಯವ್ವ ಬರುತಾಳೋ ॥ ಪ ॥

ಅವರಿಗೆ ಫಲಗಳ ಹೇ ಕೂಡಲಿಲ್ಲೆ
ನಮ್ಮಜ್ಜ ಕರೆಯಲು ಹೋಗಿದ್ದ
ಬರುವುದಿಲ್ಲವೆಂದು ಹೇಳಿದ್ದಾಳೊ
ಮುತ್ತಿನ ಮುಗತಿ ತೆಗುದಾಳೋ ॥ ಪ ॥

ಗಾಜಿನ ಬಳಿಯ ಹೊಡುದಾಳೆ
ಮಂಗಳ ಸೂತ್ರವ ಅರುದಾಳೆ
ಮಂಗಳ ಸೂತ್ರವ ಅರುದಾಳೇ ಹೇ ದೊರೆರಾಯ
ಒಪ್ಪಿದರೆ ಫಲ ಹೇ ಕೊಡುತ್ತಾನೋ ॥ ಪ ॥

ಜೀವನ ದೊರೆರಾಯ ಹೇಳುತಾನೆ
ಜೀವನ ದೊರೆರಾಯ ಹೇಳುತ್ತಾನೆ
ಬಾರಬರಿ ವಕ್ಸ ಹೋಕ ಬೇಕೋ
ಈ ಸಾವಾಲುಗಳ ಎ ಓದುಬೇಕೋ ॥ ಪ ॥

ಓದಿದರೇ ಅಲ್ಲಿ ಆಗುತಾವೋ
ಬಸಣ್ಣನವರೇ ಕರುದಾರೆ
ಬಾರಬರಿ ಕಟ್ಟ ಹೇ ಕೊಡುತ್ತಾರೆ
ಈ ಸವಾಲುಗಳ ಹೇ ಕೊಡುತ್ತಾರೆ ॥ ಪ ॥

ಬಸಣ್ಣ ವಾಲಿ ಓದುತ್ತಾನೆ
ಇದ್ದವರ ಸವಾಲಲಲ್ಲಿವಾಗೇ
ಬಾರಬರಿ ಹೇ ಕಟ್ಟು ತಿಳಿಯಲಿಲ್ಲೇ
ಇದ್ದವ ಹೇ ಆಸ್ತಿ ಅಳಿಸ್ಯಾಳೆ ॥ ಪ ॥

ಬಡರಿ ಬಸಣ್ಣ ಹೋದಲಿಲ್ಲೋ
ದಂಡ್ಯಾಣ್ಣನವರೇ ಕರುದಾರೆ
ಬರಬಾರಿ ಹೇ ಕಟ್ಟು ಕೊಡುತ್ತಾರೆ
ಇದ್ದ ಆಸ್ತಿ ಇಡುತ್ತಾರೆ ॥ ಪ ॥

ವಡ್ಡನ ದಂಡ್ಯಾಣ್ಣನು ಓದುತ್ತಾನೆ
ಕುಂತಿದ್ದ ದೊರೆರಾಯ ಮೇಲೆಳುತ್ತಾನೆ
ಎದಿಮ್ಯಾಲೆ ಕೈ ಎಳುದಾನೆ
ಎದ್ದು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನೆ ॥ ಪ ॥
ದಂಡ್ಯಾಣ್ಣ ನೆಂದೆ ಆಗುತಾವೋ
ದಂಡ್ಯಾಣ್ಣ ಇನ್ಯಾವ ಹೇ ಬಿಡಿರಪ್ಪ
ನನ ತಮ್ಮನಾಗೆ ಎ ಇರಲೊಪ್ಪ
ಎಂಟ ನೂರು ರೂಪಾಯಿಗಳ ತಂಪತಂಗ ॥ ಪ ॥

ಹಣಗಳನ್ನು ದಾನ ಧರ್ಮಗಳ ಕೊಡುತ್ತಾರೆ
ದಂಡ್ಯಾಣ್ಣನಂತೆ ಆಗುತ್ತಾವೊ
ಹೊಟ್ಟೂಟ ಇನ್ಯಾವ ಬಿಡಲಿಲ್ಲ
ಅಲ್ಲಿಂದ ದಂಡ್ಯಾಣ್ಣ ಎಲ್ಲಿಗೆ ಹೋದಾನೆ ॥ ಪ ॥

ವಡ್ಡರ ದಂಡ್ಯಾಣ್ಣನ ಮನಗೋದ
ವಡ್ಡರ ದಂಡ್ಯಾಣ್ಣ ಮನಗ್ಹೋದ ದಂಡ್ಯಾಣ್ಣ
ವಡ್ಡರ ಮನಿಯಾಗೆ ಇರುತಾಳೆ
ಒಂದೇ ದಿವಸ ಬಿಟ್ಟೆ ಎರಡ ದಿವಸ ಬಿಟ್ಟ ॥ ಪ ॥

ಮೂರ ದಿವಸಕೆ ಬರುತ್ತಾಳೆ
ಇತು ಬಾರೋ ನನ ಮಗನೇ ಮತ್ತೊಂದು ಹೇಳೇನೆ
ಊರಿಗೆ ನೀನು ಹೋಗು ಬಾರೋ
ಊರಿಗೆ ಎ ನೀನು ಹೋಗು ಬಾರೋ ಎ ಅಣ್ಣಯ್ಯ ॥ ಪ ॥

ಮಾವನವರು ಮೋಸ ಮಾಡಲಾರೋ
ಮುದ್ದಿ ಉಣಕೆ ಕರಿತಾರೋ
ಎದ್ದು ಬಾರೋ ನನ ಮಗನೆಮತ್ತೊಂದು ಹೇಳೇನ
ನಿಂತ ನೀರುಗಳ ಕುಡಿಬ್ಯಾಡೋ ॥ ಪ ॥

ಅಂದಾಳೆ ಹಾಡ್ಯಾಡಿ ಮಗನಿಗೆ ಹೇಳೇಳ
ಮಾಯವಾದಳೇ ಮಳಲಾಗಿ
ಇತು ಬಾರೋ ದಂಡ್ಯಾಣ್ಣ ಮತ್ತೊಂದು ಹೇಳೇನು
ಊರಿಗೆ ನಾನು ಹೋಗಬೇಕೋ ॥ ಪ ॥

ಹಡದವ್ವ ಹೇಳಿ ಹೋಗಿದ್ದಾಳೇ
ಮಳಿಗ್ಯಾನ ಎತ್ತು ಇಡಿದಾರೆ
ಬಂಡಿಯ ಕೊಳ್ಳ ಕಟ್ಟುತ್ತಾನೆ
ಮುಂದಾಕೆ ಬಂಡಿ ಬಿಡುತ್ತಾನೆ
ದಂಡ್ಯಾಣ್ಣ ಹಿಂದೆ ಹೋಗುತ್ತಾನೆ ॥ ಪ ॥

**ಹಾಡಿದವರು:**
ಹಿರಿಯವ್ವ ಮತ್ತು ಸಂಗಡಿಗರು, ನಿಚ್ಚವನಹಳ್ಳಿ
ಹನುಮವ್ವ ಮತ್ತು ಸಂಗಡಿಗರು, ಕ್ಯಾರಕಟ್ಟಿ

**ಹಾಡುಗಳಲ್ಲಿನ ಕಥಾವಲೋಕನ**

ಈ ಜಾನಪದ ಗೀತೆಗಳನ್ನು ಅವಲೋಕಿಸಿದರೆ ಈ ದೈವಗಳ ಇತಿಹಾಸ ತಿಳಿಯಲು ಅಗತ್ಯ ಆಕರವಾಗಿರುತ್ತದೆ. ರಾಜ ನಿರ್ಮಿಸಿದ ಭವ್ಯವಾದ ಕೋಟೆಯಲ್ಲಿ ಐಕ್ಯರಾಗಿದ್ದಾರೆ. ಈ ಕೋಟೆಯನ್ನು ಧಮನ ಮಾಡಲು ಶತ್ರುಗಳು ದಾಳಿ ಮಾಡಿದಾಗ ಅದರಲ್ಲಿರುವ ದೈವವನ್ನು ಹೊರಗೆಳೆಯಲು ಪ್ರಯತ್ನಿಸುತ್ತಾರೆ. ಆಗ ದೇವಿಯ ಆಕ್ರೋಶಗೊಂಡು ಶತೃಗಳನ್ನು ಧಮನ ಮಾಡುತ್ತಾಳೆ. ಆರಾಧಿಸುವ ಭಕ್ತರು ಆಪತ್ತಿಗೊಳಗಾದ ರಾಜರನ್ನ ಅಥವಾ ಸೈನಿಕರನ್ನ ರಕ್ಷಿಸುವಂಥ ಸನ್ನಿವೇಶ ಮತ್ತು ಜನಸಾಮಾನ್ಯರನ್ನು ಸನ್ಮಾರ್ಗದತ್ತ ಒಯ್ಯುವ ಸಂದರ್ಭ ಈ ಜನಪದ ಗೀತೆಯಲ್ಲಿ ಲೀನವಾಗಿದೆ. ದೈವದ ಮೂಲ ಎಲ್ಲಿಂದ ಆರಂಭ ಮತ್ತು ಮುಕ್ತಾಯ ಹಂತ ಎನ್ನುವುದನ್ನು ಮೊದಲನೆ ಭಾಗದಲ್ಲಿ ಪ್ರಸ್ತುತಪಡಿಸುತ್ತದೆ. ಈ ದೇವಿಯು ರಕ್ಷಿಸುತ್ತಿದ್ದ ರಾಜ್ಯ ಅಥವಾ ಕೊಟೆಯನ್ನು ಸಂರಕ್ಷಿಸುವ ಹೊಣೆಯನ್ನು ಈ ದೇವಿ ಹೊತ್ತಿರುತ್ತಾಳೆ. ಮತ್ತು ಭೂಲೋಕದಲ್ಲಿ ರಾಕ್ಷಿಸತ್ವವನ್ನು ಹೊಂದಿದ ಮನುಷ್ಯರನ್ನು ಶಿಕ್ಷಿಸಿ ಮಾನವೀಯ ಮೌಲ್ಯಗಳನ್ನು ಅನುಸರಿಸಿಕೊಂಡು ಹೋಗುವ ಜನಸಾಮಾನ್ಯರ ಅಥವಾ ಪರಿಶಿಷ್ಟ ಶ್ರೀರಕ್ಷೆಯಾಗಿ ಅವತರಿಸಿದಳು.

ಮುಸ್ಲಿಂ ದಾಳಿಕೋರನು ಹಿಂದೂ ಮೂರ್ತಿಗಳನ್ನು ಭಗ್ನಗೊಳಿಸುವ ಉದ್ದೇಶ ಹೊಂದಿದ ತನ್ನ ದೊರೆಯಾದ ಬಿರುದುಗಳನ್ನು ಪಡೆದುಕೊಳ್ಳುವ ಮಹಾದಾಸೆಯಿಂದ ಕೋಟೆಯಲ್ಲಿರುವ ಸೈನಿಕರನ್ನು ಸದೆಬಡಿದು ಮತ್ತು ಕಲ್ಲು ಕಟ್ಟಿಗೆ ಮೂರ್ತಿಗಲನ್ನು ಭಗ್ನಗೊಳಿಸಿದಂತವರಿಗೆ 'ಘಾಜಿ' ಎನ್ನುವ ಬಿರುದನ್ನು ಕೊಡುತ್ತಿದ್ದರು. ತನ್ನ ದೊರೆಯ ಆದೇಶದಂತೆ ಆ ಭಾಗದಲ್ಲಿ ನೆಲೆಸಿ ಅವರನ್ನು ಸರ್ವನಾಶ ಮಾಡಲು ಪ್ರಯತ್ನಿಸಿದ ಆ ಸನ್ನಿವೇಶವನ್ನು ಕಂಡ ದೇವಿ ಆಕ್ರೋಶಗೊಂಡು ಅವರನ್ನು ಸಂಹಾರ ಮಾಡುತ್ತಾಳೆ. ಎನ್ನುವ ಗೀತೆಯ ಪ್ರಸ್ತುತಪಡಿಸುತ್ತದೆ.

ಇದೆ ನಾಮಾಂಕಿತ ಜರ್ಮಲಿ "ದಂಡಿನ ದುರುಗಮ್ಮ" ಆ ಸಂಸ್ಥಾನದ ಮೇಲೆ ದಾಳಿ ಮಾಡುವ ಸಂದರ್ಭದಲ್ಲಿ ಸೈನಿಕನ ಹೆಂಡತಿಯಾದ ಕೊಟ್ಟೂರಿನ ಬೆಳಮರಡಿ ದುರುಗಮ್ಮ ಶತ್ರುಗಳ ಧಮನ ಕೀರ್ತಿಗೆ ಭಾಜನಳಾದಳು. ಹೋರಾಟವನ್ನು ಗಮನಿಸಿದ ಪಾಳೆಗಾರರು ದೊರೆಗಳು ಸಂಸ್ಥಾನ ರಕ್ಷಣೆಗಾಗಿ ತನ್ನ ಪ್ರಾಣವನ್ನು ಅರ್ಪಿಸಿಕೊಂಡ ದುರುಗಮ್ಮನನ್ನು ಅಂದಿನಂದ ದೈವದ ಸ್ವರೂಪಿಯಾಗಿ ಪೂಜಿಸಲು ಪ್ರಾರಂಬಿಸಿದರು. ಈ ಅರಸಿಕೇರಿ ದಂಡಿ ದುರುಗಮ್ಮನ ಇತಿಹಾಸ ಹೀಗೆ ಇರಬಹುದೆಂದು. ಸಂಶೋಧನಾ ಅಧ್ಯಯನದಿಂದ ತಿಳಿಯುತ್ತದೆ. ಇಲ್ಲಿ ಮೌಢ್ಯತೆಯೇ ಅಥವಾ ದೈವತ್ವ ಎನ್ನುವ ಗಂಭೀರವಾದ ಪ್ರಶ್ನೆಯ ಮುಂದೆ ಸರಳ ಉತ್ತರ ಆ ಗ್ರಾಮೀಣ ಜನರ ದೃಷ್ಠಿಯಲ್ಲಿ ದೈವತ್ವ ಪರಿಕಲ್ಪನೆ ಎನ್ನುವದು. ಜಾತಿವ್ಯವಸ್ಥೆಯ ಮುಂದೆ ಗೌಣವಾಗುತ್ತದೆ. ಎನ್ನುವದು ಸ್ಪಷ್ಟ ಸಂವಿದಾನ ಪರಿಚ್ಛೇದ ೧೪ರ ಪ್ರಕಾರ "ಕಾನೂನಗೆ ಮಿಗಿಲು ಯಾರು ಅಲ್ಲ" ಅದರಂತೆ ಈ ಜಾತಿಯು ದೈವತ್ವ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎನ್ನುವ ಮಾತು ಸತ್ಯ ಎನ್ನುವದಾದರೆ ಅದು ಅರಸಿಕೇರಿ "ದಂಡಿದುರುಗಮ್ಮ" ಜಾತ್ರೆಯ ಮಹತ್ವ ಪ್ರಾಚೀನ ಕಾಲದಿಂದಲೂ ದೈವತ್ವವೆಂಬುದು ತನ್ನ ಮೂಲ

ಸ್ವರೂಪವನ್ನು ಉಳಿಸಿಕೊಂಡುಬಂದಿದ್ದರೂ ಕೂಡಾ ಇಂದಿನ ಆಧುನಿಕ ಯುಗದಲ್ಲಿ ದೇವರು ಅರ್ಚಕನ ಕೈಗೊಂಬೆಯಾಗಿದೆ. ಒಟ್ಟಾರೆಯಾಗಿ ಆಧುನಕ ಯುಗದಲ್ಲಿ ಅರ್ಚಕರ ನಿರ್ಲಕ್ಷ್ಯದಿಂದಲೋ ಮುಗ್ಧ ಜನಗಳಿಗೆ ಧಾರ್ಮಿಕ ಮನೋಭಾವನೆ ವುದರ ಮೂಲಕವೋ ಅಥವಾ ಶ್ರೀ ಕ್ಷೇತ್ರಗಳಲ್ಲಿ ನಡೆಯುವಂತಹ ಅನ್ಯಾಯ ಅನಾಚರ ಅತ್ಯಚಾರ ಈ ಎಲ್ಲಾ ಕಾರಣಗಳಿಂದ ದೈವತ್ವದ ಮೂಲ ಸ್ವರೂಪ ಬದಲಾಗಿದೆ. ಜನರಲ್ಲಿ ದೇವತೆಯ ಬಗ್ಗೆ ನಂಬಿಕೆ ಹೋಗಲಿಕ್ಕೆ ಈ ಎಲ್ಲಾ ಅಂಶಗಳು ಕಾರಣವಾಗಬಹುದು. ಅಷ್ಟೆಲ್ಲಾ ಏರುಪೇರುಗಳ ಮಧ್ಯ ದೈವತ್ವವಿಲ್ಲದೇ ನಮ್ಮ ಬದುಕಿಲ್ಲ ಎನ್ನುವ ಭಕ್ತರು ಉಂಟು.

ಜಾತ್ರೆಗಳು ಸಾಮಾನ್ಯವಾಗಿ ನಂಬಿಕೆಯ ಆಧಾರದ ಮೇಲೆ ನೆಲೆಗೊಂಡ ಸಾಂಪ್ರದಾಯಿಕ ಆಚರಣೆಗಳು. ಇವೆಲ್ಲ ದಿಢೀರ್ ಹುಟ್ಟು ಪಡೆಯದೇ ಮನುಷ್ಯನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ನೆಲೆಗೊಂಡ ಜಾನಪದ ಸಂಪ್ರದಾಯಗಳು. ಈ ಜನಪದ ಸಂಸ್ಕೃತಿ ಬದಲಾಗುತ್ತಿರುವ ಸಾಮಾಜಿಕ ಹಿನ್ನೆಲೆಯಲ್ಲಿ ಕಾಲ ಸಂದರ್ಭಗಳಿಗೆ ಅನುಗುಣವಾಗಿ ಅರ್ಥಪೂರ್ಣವಾದ ಹಿನ್ನೆಲೆಯನ್ನು ಪಡೆದುಕೊಂಡಿರುತ್ತದೆ. ಹೀಗೆ ಆಚರಣೆಯಲ್ಲಿದ್ದ ಎಷ್ಟೋ ಹಬ್ಬ ಜಾತ್ರೆಗಳು ಬದಲಾದ ರಾಜಕೀಯ, ಸಾಮಾಜಿಕ, ಜೀವನ ಮೌಲ್ಯಗಳ ಹೊಡೆತಕ್ಕೆ ಸಿಕ್ಕು ತಮ್ಮ ವೈಶಿಷ್ಟ್ಯವನ್ನು ಕಳೆದುಕೊಂಡಿವೆ. ಕೆಲವಂತೂ ಇಂದಿಗೂ ಹೇಳ ಹೆಸರಿಲ್ಲದಂತಾಗಿದೆ ಎನ್ನಬಹುದು.

### ಭಾಗ – ೨

ಜನಪದ ಗೀತೆಯು ಆರಂಭದಲ್ಲಿ ದೈವಗಳ ಸ್ಮರಣೆಯಿಂದ ಆರಂಭವಾಗುತ್ತದೆ. ದೈವದ ಪ್ರತಿರೂಪವಾದ ಮರಿಯಜ್ಜನ ಕೌಟುಂಬಿಕ ಆಸ್ತಿಯ ವಿವಾದದ ವಸ್ತುವನ್ನು ಬಳಸಿಕೊಂಡು ದೈವತ್ವ ಬಣ್ಣದ ಲೇಪವನ್ನು ಮಾಡಿ ಈ ಜನಪದರು ಇದನ್ನು ದೈವದ ನೆಪದ ಮೂಲಕ ಇತಿಹಾಸ ರೂಪವಾಗಿ ರೂಪಾಂತರಿಸುವಲ್ಲಿ *ಜನಪದಗೀತೆ ತನ್ನದೇ ಆದ ಮೆರಗನ್ನು ಪಡೆದಿದೆ.*

ಮರಿಯಜ್ಜನ ಮಡದಿ ಪರಪುರುಷನೊಂದಿಗೆ ಅನೈತಿಕ ಸಂಬಂಧವನ್ನಿಟ್ಟುಕೊಂಡು ತನ್ನ ಗಂಡನನ್ನ ಧಿಕ್ಕರಿಸಿ ಬೇರೆ ಊರಿಗೆ ಪಲಾಯನಗೊಂಡು ಅಲ್ಲಿ ಒಂದು ಮಗುವಿಗೆ ಜನ್ಮವಿತ್ತಳು. ಆ ಮಗುವಿನ ಹೆಸರು ಬಸಣ್ಣ. ಮರಿಯಜ್ಜನ ಸಹೋದರರು ಆಸ್ತಿ ವಿವಾದ ಬಳಸಿಕೊಂಡು ಕಥೆಯನ್ನು ಹೆಣೆಯುವದರೊಂದಿಗೆ ಎರಡು ವರ್ಗಗಳಾಗಿ ಒಂದು ಗುಂಪಿನ ಪರ ಶ್ರೀಮಂತರಾದ ಕಬಡದ ವೀರಪ್ಪ ಇನ್ನೊಂದು ಗುಂಪಿನ ಪರ ದೈವವಾದ ದಂಡಿನ ದುರುಗಮ್ಮನ ಪರ ನಿಚ್ಚವನಹಳ್ಳಿಯ ಹನುಮನಗೌಡರು ಹೋರಾಟ ಮಾಡುತ್ತಾರೆ. ಕಥೆಯನ್ನು ಬೆಳೆಸುತ್ತಾ ಕೋರ್ಟಗೆ ಹೋದ ಸಂದರ್ಭದಲ್ಲಿ ತೀರ್ಪು ಈತನ ಪರವಾಗಿ ನಿಲ್ಲುತ್ತದೆ.

ಭಾಗ ೨ರಲ್ಲಿ ದೈವದ ಹೊರಣ ಮಾಡಿ ಕೌಟುಂಬಿಕ ಬದುಕಿನ ವ್ಯವಸ್ಥೆಯನ್ನು ತೆರೆದುತೋರಿಸಿ ಅದನ್ನು ಕಣುಕವನ್ನು ಲೇಪಿಸುವದರ ಮೂಲಕ ಗೀತೆಯನ್ನು ಜನಪದರು ಹಾಡಿನ ರೂಪದಲ್ಲಿ

ದೈವತ್ವದ ಮಹಿಮೆಯನ್ನು ಜನಸಾಮಾನ್ಯರಿಗೆ ತಿಳಿಸುವ ಪ್ರಯತ್ನವನ್ನು ಈ ಜನಪದರು ಮಾಡಿದ್ದಾರೆ.

ಈ ಗೀತೆಯನ್ನು ನಾನು ಸಂಗ್ರಹಿಸುವದರ ಜೊತೆಗೆ ವಿಶ್ಲೇಷಿಸುತ್ತಾ ಈ ಜನಪದರ ಬದುಕಿನಲ್ಲಿ ಭಾಗವಾದ ಈ ಗೀತೆಗಳು ಉಳಿಸುವ ಒಂದು ಪ್ರಯತ್ನವನ್ನು ಮಾಡಿದ್ದಾನೆ. ಮೌಖಿಕ ಪರಂಪರೆಯು ತನ್ನ ಅಸ್ತಿತ್ವವು ಕಾಲಗರ್ಭದಲ್ಲಿ ಗರ್ಭೀಕರಿಸಿ ಹೋದರೆ ಮುಂದಿನ ಯುವ ಪೀಳಿಗೆಗೆ ಜನಪದ ಗೀತೆ ಇಲ್ಲದಾಗುತ್ತದೆ. ಈ ಕಾರಣದಿಂದ ಅದನ್ನು ಬರವಣಿಗೆಯ ರೂಪದಲ್ಲಿ ಸಂಗ್ರಹಿಸುವ ಒಂದು ಸಣ್ಣ ಪ್ರಯತ್ನ ಮಾಡಿದ್ದೇನೆ.

## ೨. ವಕ್ತೃ ವಿವರ

| ಕ್ರ.ಸಂ. | ಹೆಸರು | ವೃತ್ತಿ | ವಯಸ್ಸು | ಸ್ಥಳ |
|---|---|---|---|---|
| ೧. | ಶ್ರೀ ಚಂದ್ರಪ್ಪ | ಕೃಷಿಕರು | ೫೬ | ಅರಸಿಕೇರಿ |
| ೨. | ಶ್ರೀಹನುಮಂತಪ್ಪ | ಜಾನಪದ ಹಾಡುಗಾರ | ೬೮ | ಅರಸಿಕೇರಿ |
| ೩. | ಶ್ರೀಮತಿ ಪಕ್ಕಿರವ್ವ | ಜಾನಪದ ಹಾಡುಗಾರ | ೬೯ | ಅರಸಿಕೇರಿ |
| ೪. | ಶ್ರೀಮತಿ ಹನುಮವ್ವ | ಜಾನಪದ ಹಾಡುಗಾರ | ೫೮ | ಕ್ಯಾರಕಟ್ಟೆ |
| ೫. | ಶ್ರೀಮತಿ ಹಿರಿಯವ್ವ | ಜಾನಪದ ಹಾಡುಗಾರ | ೫೭ | ನಿಚ್ಚವನಹಳ್ಳಿ |
| ೬. | ಶ್ರೀ ದುರುಗೇಶ | ಉಪನ್ಯಾಸಕರು | ೩೦ | ಅರಸಿಕೇರಿ |
| ೭ | ಶ್ರೀ ಅಂಜಿನಪ್ಪ | ವಿದ್ಯಾರ್ಥಿ | ೨೯ | ಹಿಕ್ಕಿಮಗೇರಿ |
| ೮. | ಶ್ರೀ ಎ ಸಿದ್ದಪ್ಪ | ನಿವೃತ್ತ ಶಾಲಾ ತನಿಖಾಧಿಕಾರಿ | ೭೦ | ಯರಬಳ್ಳಿ |
| ೯ | ಶ್ರೀ ದತ್ತಾತ್ರೆಯಪ್ಪ | ಕೃಷಿಕರು | ೫೦ | ನಿಚ್ಚವನಹಳ್ಳಿ |
| ೧೦. | ಶ್ರೀದೇವೆಂದ್ರಪ್ಪ | ರಾಜಕೀಯ | ೬೦ | ಅರಸಿಕೇರಿ |
| ೧೧. | ಶ್ರೀಷಣ್ಮುಖಪ್ಪ | ಕೃಷಿಕರು | ೬೮ | ಅರಸಿಕೇರಿ |
| ೧೨. | ಶ್ರೀಆಂಜ್ಯೋಳ ನಿಂಗಪ್ಪ | ಕೃಷಿಕರು | ೬೮ | ಜೋಷಿ ಲಿಂಗಾಪುರ |
| ೧೩ | ಶ್ರೀಮಂಜಪ್ಪ | ಕೃಷಿಕರು | ೪೮ | ನಿಚ್ಚವನಹಳ್ಳಿ |
| ೧೪. | ಶ್ರೀಶಾಂತಲಿಂಗ ದೇಶಿ ಕೆಂದ್ರ ಮಹಾಸ್ವಾಮಿಗಳು | ಸಮಾಜಸುಧಾರಕರು | ೫೮ | ಅರಸಿಕೇರಿ |
| ೧೫. | ಶ್ರೀ ಮಂಜುನಾಥ | ಉಪನ್ಯಾಸಕರು | ೨೮ | ಕಣವಿ |
| ೧೬. | ಶ್ರೀಪಂಪಾಪತಿ ದೊರೆ | ಕೃಷಿಕರು | ೭೦ | ಜರ್ಮಲಿ |
| ೧೭. | ಶ್ರೀಸಿದ್ದಪ್ಪನಾಯಕ | ಕೃಷಿಕರು | ೬೫ | ಜರ್ಮಲಿ |
| ೧೮. | ಶ್ರೀಸಿದ್ದಪ್ಪ ದೊರೆ | ಪೋಲಿಸಿಲಾಖೆ | ೬೮ | ಚಿತ್ರದುರ್ಗ |
| ೧೯. | ಶ್ರೀಗುರುಬಸವನಗೌಡ | ಪ್ರಾಂಶುಪಾಲರು | ೭೦ | ಹರಪನಹಳ್ಳಿ |
| ೨೦. | ಶ್ರೀಬಡಿಗೇರ | ಉಪನ್ಯಾಸಕರು | ೬೦ | ಹರಪನಹಳ್ಳಿ |

| | | | | |
|---|---|---|---|---|
| ೨೧. | ಶ್ರೀಎಸ್.ಎಸ್.ಹಿರೇಮಠ | ಪ್ರಾಂಶುಪಾಲರು | ೬೦ | ಕೊಟ್ಟೂರು |
| ೨೨. | ಡಾ.ಅಕ್ಕಿಸುಜಾತ | ಉಪನ್ಯಾಸಕರು | ೪೫ | ಹರಪನಹಳ್ಳಿ |
| ೨೩. | ಶ್ರೀಕುಂ.ಬಾ. ಸದಾಶಿವಪ್ಪ | ನಿ.ಶಿಕ್ಷಕರು | ೭೨ | ಹರಪನಹಳ್ಳಿ |
| ೨೪. | ಡಾ. ಕೆ. ರುದ್ರಪ್ಪ | ಉಪನ್ಯಾಸಕರು | ೫೦ | ಹರಪನಹಳ್ಳಿ |
| ೨೫. | ಶ್ರೀ ಶಾಂತವೀರಯ್ಯ | ಉಪನ್ಯಾಸಕರು | ೫೬ | ಹರಪನಹಳ್ಳಿ |
| ೨೬. | ಶ್ರೀ ಎಸ್.ಎಸ್.ಮುದ್ದಿ | ಉಪನ್ಯಾಸಕರು | ೫೮ | ಹರಪನಹಳ್ಳಿ |
| ೩೦. | ಶ್ರೀ ಶ್ರೀನಿವಾಸಾಚಾರಿ | ವಿದ್ಯಾರ್ಥಿ | ೨೮ | ಸೋಗಿ |
| ೩೧. | ಶ್ರೀ ಪರಶುರಾಮ | ಉಪನ್ಯಾಸಕರು | ೩೦ | ಯಲ್ಲಾಪುರ |
| ೩೨. | ಶ್ರೀ ದಂಡಿ ದುರುಗಮ್ಮ | ಕಮೀಟಿಸದಸ್ಯೆ | – | ಅರಸಿಕೇರಿ |
| ೩೩. | ಶ್ರೀ ಎ.ಸಿ.ಚಿಕ್ಕಮಠ | ಉಪನ್ಯಾಸಕರು | ೫೬ | ಹರಪನಹಳ್ಳಿ |
| ೩೪. | ಶ್ರೀ ಮಂಜಪ್ಪ | ಕೃಷಿಕರು | ೫೦ | ಕಸವನಹಳ್ಳಿ |
| ೩೫. | ಶ್ರೀ ವೀರೇಶ | ಉಪನ್ಯಾಸಕರು | ೩೦ | ಅರಸಿಕೇರಿ |
| ೩೪. | ಶ್ರೀ ಪ್ರಕಾಶ ಪಾಟೀಲ್ | ವ್ಯಾಪಾರಿಗಳು | ೨೯ | ಅರಸಿಕೇರಿ |
| ೩೫. | ಶ್ರೀ ಪುಟ್ಟೇಗೌಡ | ಕೃಷಿಕರು | ೭೫ | ಅರಸಿಕೇರಿ |
| ೩೬. | ಶ್ರೀ ಮೈಸೂರು ಮಂಜುನಾಥ | ವರದಿಗಾರರು | ೭೦ | ಹರಪನಹಳ್ಳಿ |
| ೩೭. | ಶ್ರೀ ಹೆಚ್.ನಿಂಗಪ್ಪ | ವಿದ್ಯಾರ್ಥಿ | ೨೮ | ಕಣವಿಹಳ್ಳಿ |
| ೩೮. | ಶ್ರೀ ಗೋಣಿಬಸಪ್ಪಗೌಡ | ವಿದ್ಯಾರ್ಥಿ | ೨೮ | ಕಣವಿಹಳ್ಳಿ |
| ೩೯. | ಶ್ರೀ ವೀರಪ್ಪ | ಶಿಕ್ಷಕರು | ೩೦ | ಕಣವಿಹಳ್ಳಿ |
| ೪೦. | ಶ್ರೀ ವಿಶ್ವನಾಥ | ವಿದ್ಯಾರ್ಥಿ | ೨೫ | ಕ್ಯಾರಕಟ್ಟಿ |
| ೪೧. | ಎಚ್. ಮಲ್ಲಿಕಾರ್ಜುನ | ಉಪನ್ಯಾಸಕರು | ೪೦ | ಹರಪನಹಳ್ಳಿ |
| ೪೨. | ಎನ್. ವೀರಭದ್ರಪ್ಪ | ಉಪನ್ಯಾಸಕರು | ೩೦ | ಕಣಿವಿಹಳ್ಳಿ |


ಅರಿಸಿಕೇರಿ ದಂಡಿನ ದುರುಗಮ್ಮನ ಅರ್ಚಕ ವಂಶಸ್ಥರ ನಕ್ಷೆ
ಮರಿಯಪ್ಪ
ದಂಡ್ಯೆಪ್ಪ ಪಕ್ಕಿರಪ್ಪ
ಹನುಮಜ್ಜ ಮರಿಯಜ್ಜ ಕುಂಡಿಕೆಂಚಪ್ಪ ಭರಮಲಿಂಗಮ್ಮ ದಂಡ್ಯೆಮ್ಮ
ಸಿಡ್ಲಮ್ಮ ಮರಿಯಜ್ಜ ದೊಡ್ಡ ಹಾಲಮ್ಮ
ಮರಿಯವ್ವ ಹನುಮಮ್ಮ
ಮೈಲೆಪ್ಪ
ಪಕ್ಕಿರವ್ವ ದುರುಗಪ್ಪ ಹನುಮಂತಪ್ಪ ಗಂಗವ್ವ ಮೈಲೆಪ್ಪ ಚಂದ್ರಪ್ಪ
ಕೆಂಚವ್ವ ದಂಡ್ಯೆಮ್ಮ ಮರಿಯಪ್ಪ
ದೊಡ್ಡ ಮೈಲೆಪ್ಪ ಸಣ್ಣ ಮೈಲೆವ್ವ ಸಣ್ಣ ಮೈಲೆಪ್ಪ ಬಿದ್ದಾಡೆಪ್ಪ ಬಿದ್ದಾಡೆವ್ವ

## ೪. ಆಕರ ಗ್ರಂಥಗಳು


೧. ಗ್ರಾಮದೇವತೆಗಳು, ಡಾ. ಸಿದ್ದಲಿಂಗಯ್ಯ, ೧೯೯೭, ಮೂಲಭಾರತಿ ಪ್ರಕಾಶನ

೨. ಉಜ್ಜಯಿನಿ ಚೌಡಮ್ಮ, ಡಾ.ಹಿ.ಚಿ.ಬೋರಲಿಂಗಯ್ಯ, ೧೯೭೯, ದಿನಕರಪ್ರಕಾಶನ, ಬೆಂಗಳೂರು

೩. ದಕ್ಷಿಣ ಕರ್ನಾಟಕ ಕಾವ್ಯ, ಡಾ.ಪರಮಶಿವಯ್ಯ.ಜಿ.ಎಂ, ೧೯೭೯, ಪ್ರಸಾರಾಂಗ, ಮೈಸೂರ ವಿ.ವಿ., ಮೈಸೂರು

೪ ಗ್ರಾಮೀಣ, ಡಾ.ಚಿದಾನಂದಮೂರ್ತಿ, ೧೯೮೪, ಬಾಪ್ಕೊ ಪ್ರಕಾಶನ, ಬೆಂಗಳೂರು

೫ ಕೆಲವು ಜನಪದ ಸಂಪ್ರದಾಯ, ಚಲುಮೆಗೌಡ, ೧೯೯೩, ಪೌರಶ್ರೀಮುದ್ರಣ, ಬೆಂಗಳೂರು

೬. ಗ್ರಾಮಸಮಾಜ, ಜೋಗಿನ್ ಶಂಕರ್, ೧೯೯೫, ಜೀವನ ಪ್ರಕಾಶನ, ಬೆಂಗಳೂರು

೭ ಗ್ರಾಮೋನ್ನತಿ, ಎಚ್.ಎಂ.ಮರುಳಸಿದ್ದಯ್ಯ, ೧೯೯೫, ಸ್ವ ಪ್ರಕಾಶನ, ಇಟಗಿ

೮ ಕರ್ನಾಟಕ ಗ್ರಾಮದೇವತೆಗಳು, ಡಾ.ಡಿ.ಲಿಂಗಯ್ಯ, ೧೯೮೪, ಬೆಂಗಳೂರು

೯. ಕರ್ನಾಟಕ ಜಾತ್ರೆಗಳು, ಡಾ.ಹಂ.ಪ.ನಾ, ೧೯೮೫, ಕ.ಸಾ.ಪ., ಬೆಂಗಳೂರು

೧೦. ಗ್ರಾಮ ವ್ಯಾಸಂಗ, ಡಾ. ಹೆಚ್.ಬಿ.ನಾಗೇಶ್, ೧೯೮೧, ಧಾರವಾಡ

೧೧. ಕರ್ನಾಟಕಶಕ್ತಿ ದೇವತೆಗಳು, ಡಾ. ಡಿ.ಬಿ. ನಾಯಕ್, ೧೯೮೭, ಬೆಂಗಳೂರು

೧೨. ಹೈದ್ರಾಬಾದ್ ಕರ್ನಾಟಕ ಗ್ರಾಮದೇವತೆಗಳು, ಡಾ. ಚನ್ನಣ್ಣ ವಾಲಿಕಾರ, ೧೯೯೭, ಕನ್ನಡ ಅ.ಪೀಠ ಕ.ವಿ.ವಿ., ಧಾರವಾಡ

೧೩. ಕನ್ನಡ ಜನಪದ ವಿಶ್ವಕೋಶ, ಡಾ. ಚಂದ್ರಶೇಖರ ಕಂಬಾರ, ಬೆಂಗಳೂರು

೧೪. ಜನಪದಲೋಚನ, ಡಾ.ಅಂಬಳಿಕೆ ಹಿರಿಯಣ್ಣ, ೧೯೯೪, ಪ್ರಜ್ವಲಪ್ರಕಾಶನ, ಮೈಸೂರು

೧೫. ದಲಿತವರ್ಗದ ಶರಣ ಮತ್ತು ಶರಣೀಯರ ಒಂದು ಅಧ್ಯಯನ, ಡಾ. ಮ.ನ.ಜವರಯ್ಯ

೧೬. ಮಧ್ಯಕಾಲೀನ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಡಾ.ಚಿದಾನಂದಮೂರ್ತಿ

೧೭. Marketing History Sake, ಲೋಕಾಯಿತ್ ದೇವಿಪ್ರಸಾದ ಚಟ್ಟೋಪಾಧ್ಯಾಯ

೧೮. ಜನಪದ ಸಂಸ್ಕೃತಿ, ಎಸ್.ಎಸ್, ಹಿರೇಮಠ

೧೯. ಜನಪದಕಾವ್ಯ, ಡಾ.ಜಿ.ಶಂ.ಪರಮಶಿವಯ್ಯ

೨೦. ಏಳೂರಿನ ಗ್ರಾಮ ದೇವತೆ, ಡಾ. ಸಿ.ಟಿ.ಗುರುಪ್ರಸಾದ್, ಕನ್ನಡ ವಿ.ವಿ.

೨೧. ಗ್ರಾಮ ಅಧ್ಯಯನ, ಶ್ರೀ ರಾಮ ಇಟ್ಟಣ್ಣನವರ, ೧೯೯೫

೨೨. ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಕುಂ.ಬಾ.ಸ., ೧೯೯೦, ಶ್ರೀಮಾಲತೇಶ ಪ್ರಕಾಶನ, ಕುಂಚೂರು

೨೩. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ದರ್ಶನ, ಡಾ. ಜಿ.ಎಂ. ನಾಗಯ್ಯ

೨೪. ಜಾತ್ರೆಗಳು, ಕರ್ನಾಟಕ ದಲಿತ ಸಂಸ್ಕೃತಿ, ಪರಂಪರೆ ಭಾಗ-೨, ಡಾ.ಎಸ್.ಎಸ್.ಹಿರೇಮಠ, ೧೯೯೩ ಸಮತಾ ಪ್ರಕಾಶನ, ಹೊಸಪೇಟೆ

೨೫.. ಮೂರ್ತಿಶಿಲ್ಪ ನೆಲೆ ಮತ್ತು ಹಿನ್ನೆಲೆ, ಡಾ.ರಾಮಚಂದ್ರಪ್ಪ ಎಸ್.ಕೆ, ೧೯೭೫, ಪ್ರಸಾರಾಂಗ, ಬೆಂಗಳೂರು ವಿ.ವಿ

೨೬. ಜನಪದ ದೇವತೆಗಳು ಮತ್ತು ಶಿಷ್ಟ ದೇವತೆಗಳು, ಡಾ.ಬಸವರಾಜ ಸಬರದ, ಕುಂದಾಪುರ ಡಾ. ಗುಂಡ್ಮಿ ಪ್ರಕಾಶನ

೨೭. ಜಾನಪದ ಲೋಕ, ಡಾ ಚನ್ನಣ್ಣ ವಾಲಿಕಾರ, ೧೯೯೩, ದಲಿತ ಬಂಡಾಯ ವಿಚಾರ ಪ್ರಚಾರ, ಬಂಡೇಪುರ ಗುಲ್ಬರ್ಗಾ

೨೮. ಕರ್ನಾಟಕ ದೇವದಾಸಿಯರ ಸಮಾಜೋ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಸಮಸ್ಯೆ, ಸಮಗ್ರ ಅಧ್ಯಯನ, ಡಾ. ಚನ್ನಣ್ಣವಾಲಿಕಾರ, ಲಕ್ಷ್ಮೀಮುದ್ರಣ, ಬೆಂಗಳೂರು

೨೯. ಜನಪದ ಪರಿಭಾವನೆ, ಡಾ.ಜಿ.ಆರ್.ತಿಪ್ಪೇಸ್ವಾಮಿ, ೨೦೦೧, ಬ್ಯಾಲದಕರೆ ಪ್ರಕಾಶನ ಬ್ಯಾಲದಹಳ್ಳಿ

೩೦. ಕರ್ನಾಟಕ ಗ್ರಾಮದೇವತೆಗಳ ಪ್ರಶ್ನಾವಳಿ, ಶ್ರೀ ಶ್ರೀಧರಮೂರ್ತಿ, ೧೯೮೧, ಪುನರ್ವಸು ಪ್ರಕಾಶನ ಬೆಂಗಳೂರು

೩೧. ಸ್ತ್ರೀವಾದ (ಡಾ.ಚಿಂತನಮಾಲೆ-೫), ಡಾ. ಹೆಚ್. ಎಸ್. ಶ್ರೀಮತಿ, ೨೦೦೩, ಪ್ರಸಾರಾಂಗ ಕನ್ನಡ ವಿ.ವಿ.

೩೨. ಮಹಿಳಾ ಅಧ್ಯಯನ (ದಕ್ಷಿಣಾಯನ ಸಂಚಿಕೆ), ಡಾ. ಹೆಚ್.ಎಸ್.ಶ್ರೀಮತಿ೧೯೯೯, ಕನ್ನಡ ವಿ.ವಿ.

೩೩. ಮಹಿಳಾ ಅಧ್ಯಯನ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಟುವಟಿಕೆಗಳು, ಡಾ. ಪ್ರೀತಿ ಶುಭಚಂದ್ರ, ೨೦೦೨, ಕನ್ನಡ ವಿ.ವಿ., ವಿದ್ಯಾರಣ್ಯ

೩೪. ಮಾಟ, ಮಂತ್ರ,ಮೋಡಿ, ಡಾ. ಸ.ಚಿ.ರಮೇಶ್, ೨೦೦೩, ಕನ್ನಡ ವಿ.ವಿ., ವಿದ್ಯಾರಣ್ಯ

೩೫. ಜನಪದ ಸಮಾಜ ಸಂಸ್ಕೃತಿ, ಡಾ..ಎಸ್.ಎಸ್.ಹಿರೇಮಠ, ೨೦೦೫, ಸೂರ್ಯ ಪ್ರಕಾಶನ, ಮಲ್ಲಾಡಿಹಳ್ಳಿ

೩೬. ಜನಪದ ಸಾಹಿತ್ಯ ದರ್ಶನಭಾಗ-೧೫, ಡಾ.ಎಂ.ಎಸ್.ವೃಷಬೇಂದ್ರಸ್ವಾಮಿ

